KA / BG - GPO/ 2515 /WPP-47/ 2009 - 2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**



| ಭಾಗ – ***III*** | ಬೆಂಗಳೂರು, ಬುಧವಾರ, ಜನವರಿ ೧೨, ೨೦೧೧ (ಪುಷ್ಯ ೨೨, ಶಕ ವರ್ಷ ೧೯೩೨) | ನಂ. ೩೫ |
|---|---|---|



**ಪ್ರಾದೇಶಿಕ ಆಯುಕ್ತರ ಕಾರ್ಯಾಲಯ, ಬೆಂಗಳೂರು**

2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು–560 027

**ಅಧಿಸೂಚನೆ**

**ಸಂಖ್ಯೆ ಪ್ರಾಆಕ/ಚುನಾವಣೆ/ವಿವ/36–1/2010–11, ದಿನಾಂಕ 10–01–2011**

ಆಯುಕ್ತರು, ರಾಜ್ಯ ಚುನಾವಣಾ ಆಯೋಗ, ಕರ್ನಾಟಕ ಬೆಂಗಳೂರು ರವರ ಆದೇಶ ಸಂಖ್ಯೆ ರಾಚುಆ/272/ಟಿಜಡ್‌ಪಿ/2010 ದಿನಾಂಕ 06–12–2010 ರಂತೆ ತಿಳಿಸಿರುವಂತೆ ಶಿವಮೊಗ್ಗ ಜಿಲ್ಲೆಯ ಶಿವಮೊಗ್ಗ ತಾಲ್ಲೂಕು ಪಂಚಾಯತಿಯ ಸದಸ್ಯರ ಸ್ಥಾನಗಳಿಗೆ ದಿನಾಂಕ 26–12–2010 ರಂದು ಸಾರ್ವತ್ರಿಕ ಚುನಾವಣೆಗಳು ನಡೆದಿದ್ದು, ನಂತರ ದಿನಾಂಕ 04–01–2011 ರಂದು ನಡೆದ ಮತಗಳ ಎಣಿಕೆಯಲ್ಲಿ ಈ ಕೆಳಕಂಡವರು ಶಿವಮೊಗ್ಗ ಜಿಲ್ಲೆಯ ಶಿವಮೊಗ್ಗ ತಾಲ್ಲೂಕು ಪಂಚಾಯತಿಗೆ ಸದಸ್ಯರಾಗಿ ಆಯ್ಕೆಯಾಗಿರುವುದಾಗಿ ಸಂಬಂಧಿಸಿದ ಚುನಾವಣಾಧಿಕಾರಿಗಳು ಘೋಷಿಸಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಕಲಂ 133 ರ ತಿದ್ದುಪಡಿ ಆದೇಶದಂತೆ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಅನುಬಂಧದ ಅಂಕಣ (4) ರಲ್ಲಿ ನಮೂದಿಸಿರುವವರು ಅಂಕಣ (2) ರಲ್ಲಿ ನಮೂದಿಸಿರುವ ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದಿಂದ ಆಯ್ಕೆಯಾಗಿರುತ್ತಾರೆ ಎಂಬುದಾಗಿ ಪ್ರಕಟಿಸಿರುತ್ತೇನೆ.

**ಅನುಬಂಧ**

**ಜಿಲ್ಲೆ : ಶಿವಮೊಗ್ಗ** **ತಾಲ್ಲೂಕು : ಶಿವಮೊಗ್ಗ**

| ಕ್ರ. ಸಂ. | ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಮೀಸಲಿರಿಸಿದ ಸದಸ್ಯ ಸ್ಥಾನದ ವರ್ಗ | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಪಕ್ಷ |
|---|---|---|---|---|
| **1** | **2** | **3** | **4** | **5** |
| 1 | ಅಬ್ಬಲಗೆರೆ | ಅನುಸೂಚಿತ ಪಂಗಡ (ಮಹಿಳೆ) | ಕಮಲಮ್ಮ, ಬಸವನಗಂಗೂರು, ಶಿವಮೊಗ್ಗ ತಾಲ್ಲೂಕು. | ಜನತಾ ದಳ (ಜಾತ್ಯಾತೀತ) |
| 2 | ಅಗಸವಳ್ಳಿ | ಹಿಂದುಳಿದ "ಅ" ವರ್ಗ (ಮಹಿಳೆ) | ರಜಿನಾ ಖಾತೂನ್ (ಬಾಬು) ಕಲ್ಲೂರು ಹಾಯ್‌ಹೊಳೆ ಅಂಚೆ, ಶಿವಮೊಗ್ಗ | ಜನತಾ ದಳ (ಜಾತ್ಯಾತೀತ) |
| 3 | ಆಯನೂರು | ಅನುಸೂಚಿತ ಜಾತಿ (ಮಹಿಳೆ) | ದೇವಿಬಾಯಿ ಧರ್ಮನಾಯ್ಕ ಡಿ. ಆಯನೂರು ಕೋಟೆ, ಶಿವಮೊಗ್ಗ ತಾಲ್ಲೂಕು | ಭಾರತೀಯ ಜನತಾ ಪಕ್ಷ |
| 4 | ಗಾಜನೂರು | ಸಾಮಾನ್ಯ | ಎಂ.ಜಿ. ಪರಮೇಶ ಮುಳ್ಳುಕೆರೆ ಗಾಜನೂರು, ಶಿವಮೊಗ್ಗ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 5 | ಹಾರನಹಳ್ಳಿ | ಹಿಂದುಳಿದ "ಅ" ವರ್ಗ (ಮಹಿಳೆ) | ಭಾಗ್ಯ ಜಗದೀಶ್ ಸಿ.ಎಲ್. ಬಾಳೇಕೊಪ್ಪ ಗ್ರಾಮ, ಶಿವಮೊಗ್ಗ ತಾಲ್ಲೂಕು. | ಭಾರತೀಯ ಜನತಾ ಪಕ್ಷ |
| 6 | ಹೊಳಲೂರು | ಸಾಮಾನ್ಯ | ಹೆಚ್.ಕೆ. ದೇವರಾಜ್ ಹೊಳಲೂರು, ಶಿವಮೊಗ್ಗ ತಾಲ್ಲೂಕು. | ಭಾರತೀಯ ಜನತಾ ಪಕ್ಷ |
| 7 | ಹೊಸೂಡಿ | ಅನುಸೂಚಿತ ಜಾತಿ (ಮಹಿಳೆ) | ಉಣ್ಣಾಮಲೈ ಹೊಳೆ ಬೆನವಳ್ಳಿ ಗ್ರಾಮ, ಶಿವಮೊಗ್ಗ ತಾಲ್ಲೂಕು. | ಭಾರತೀಯ ಜನತಾ ಪಕ್ಷ |
| 8 | ಕಡೇಕಲ್ | ಸಾಮಾನ್ಯ (ಮಹಿಳೆ) | ಅತಿಯಾ ಬೇಗಂ ಕಡೇಕಲ್, ಶಿವಮೊಗ್ಗ ತಾಲ್ಲೂಕು. | ಜನತಾ ದಳ (ಜಾತ್ಯಾತೀತ) |

| ಕ್ರ. ಸಂ. | ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಮೀಸಲಿರಿಸಿದ ಸದಸ್ಯ ಸ್ಥಾನದ ವರ್ಗ | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಪಕ್ಷ |
|---|---|---|---|---|
| 1 | 2 | 3 | 4 | 5 |
| 9 | ಕೊಮ್ಮನಾಳು | ಸಾಮಾನ್ಯ (ಮಹಿಳೆ) | ಜಿ.ಎಸ್.ಗೀತಾ ಹರಮಘಟ್ಟ, ಶಿವಮೊಗ್ಗ | ಭಾರತೀಯ ಜನತಾ ಪಕ್ಷ |
| 10 | ಕೂಡ್ಲಿ | ಅನುಸೂಚಿತ ಜಾತಿ | ಯೋಗೇಶನಾಯ್ಕ ಬಿನ್ ಶಾಮ್ಯಾನಾಯ್ಕ, ಗುಡ್ರುಕೊಪ್ಪ ಶೆಟ್ಟಿಹಳ್ಳಿ ಅಂಚೆ | ಜನತಾ ದಳ (ಜಾತ್ಯಾತೀತ) |
| 11 | ಕುಂಸಿ | ಸಾಮಾನ್ಯ (ಮಹಿಳೆ) | ಶಾರದ ಕೆ.ಪಿ. ಕೋಂ ವಿ.ಎಸ್. ರಂಗನಾಥ ಮಾತಂಗಿ ಬಡಾವಣೆ ಕುಂಸಿ | ಭಾರತೀಯ ಜನತಾ ಪಕ್ಷ |
| 12 | ಕುಂಚೇನಹಳ್ಳಿ | ಸಾಮಾನ್ಯ | ಚಂದ್ರಶೇಖರಪ್ಪ ಕೆ.ವಿ. ಬಿನ್ ಕೆ.ಎಂ.ಬಸಪ್ಪಗೌಡ್ರು ಬಿಕ್ಕೋನಹಳ್ಳಿ ಅಂಚೆ ಕೊಮ್ಮನಾಳು | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 13 | ಮತ್ತೂರು | ಅನುಸೂಚಿತ ಜಾತಿ (ಮಹಿಳೆ) | ಕಮಲಮ್ಮ ಕೋಂ ಆರ್. ರಾಜೇಂದ್ರ ಶ್ರೀರಾಮನಗರ ಸಂತೆಕಡೂರು ಅಂಚೆ | ಭಾರತೀಯ ಜನತಾ ಪಕ್ಷ |
| 14 | ಮೇಲಿನಹನಸವಾಡಿ | ಸಾಮಾನ್ಯ (ಮಹಿಳೆ) | ಜಿ.ಆರ್.ಮಂಜುಳಾ ಕೋಂ ಶಿವಾನಂದ ಗೊಂದಿಚಟ್ನಹಳ್ಳಿ ಹನಸವಾಡಿ ಅಂಚೆ | ಜನತಾ ದಳ (ಜಾತ್ಯಾತೀತ) |
| 15 | ನಿದಿಗೆ | ಅನುಸೂಚಿತ ಜಾತಿ | ಸೋಮಶೇಖರ ಬಿನ್ ರಂಗಪ್ಪ, ನಿದಿಗೆ ಅಂಚೆ | ಜನತಾ ದಳ (ಜಾತ್ಯಾತೀತ) |
| 16 | ಪಿಳ್ಳಂಗೆರೆ | ಹಿಂದುಳಿದ "ಬ" ವರ್ಗ | ನಾಗರಾಜ ಎ. ಬಿನ್ ಅಂಕೇಗೌಡ ಪಿಳ್ಳಂಗೆರೆ | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 17 | ರಾಮನಗರ | ಸಾಮಾನ್ಯ | ರಿಜ್ವಾನ್ ಎಸ್. ಬಿನ್ ಸುಭಾನ್‌ಸಾಬ್ ಮಲ್ಲಾಪುರ ಸವಳಂಗ ಅಂಚೆ | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 18 | ತಮ್ಮಡೀಹಳ್ಳಿ | ಸಾಮಾನ್ಯ (ಮಹಿಳೆ) | ಜಿ.ಡಿ.ಗಾಯಿತ್ರಿ ಕೋಂ ಆರ್.ಕೆ. ರಾಮಚಂದ್ರಪ್ಪ ರೇಚಿಕೊಪ್ಪ ಕುಂಸಿ ಅಂಚೆ | ಭಾರತೀಯ ಜನತಾ ಪಕ್ಷ |

**ಕೆ.ಎಸ್.ಪ್ರಭಾಕರ**
ಪ್ರಾದೇಶಿಕ ಆಯುಕ್ತರು,
ಬೆಂಗಳೂರು

# ವಿಶೇಷ ಪತ್ರಿಕೆ

| ಭಾಗ – *III* | ಬೆಂಗಳೂರು, ಬುಧವಾರ, ಜನವರಿ ೧೨, ೨೦೧೧ (ಪುಷ್ಯ ೨೨, ಶಕ ವರ್ಷ ೧೯೩೨) | ನಂ. ೩೬ |
|---|---|---|

## ಪ್ರಾದೇಶಿಕ ಆಯುಕ್ತರ ಕಾರ್ಯಾಲಯ, ಬೆಂಗಳೂರು

2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು–560 027

### ಅಧಿಸೂಚನೆ

### ಸಂಖ್ಯೆ ಪ್ರಾಆಕ/ಚುನಾವಣೆ/ವಿವ/36–2/2010–11, ದಿನಾಂಕ 10–01–2011

ಆಯುಕ್ತರು, ರಾಜ್ಯ ಚುನಾವಣಾ ಆಯೋಗ, ಕರ್ನಾಟಕ ಬೆಂಗಳೂರು ರವರ ಆದೇಶ ಸಂಖ್ಯೆ ರಾಚುಆ/272/ಟಿಜಡ್‌ಪಿ/2010 ದಿನಾಂಕ 06–12–2010 ರಂತೆ ತಿಳಿಸಿರುವಂತೆ ಶಿವಮೊಗ್ಗ ಜಿಲ್ಲೆಯ **ಭದ್ರಾವತಿ ತಾಲ್ಲೂಕು** ಪಂಚಾಯತಿಯ ಸದಸ್ಯರ ಸ್ಥಾನಗಳಿಗೆ ದಿನಾಂಕ 26–12–2010 ರಂದು ಸಾರ್ವತ್ರಿಕ ಚುನಾವಣೆಗಳು ನಡೆದಿದ್ದು, ನಂತರ ದಿನಾಂಕ 04–01–2011 ರಂದು ನಡೆದ ಮತಗಳ ಎಣಿಕೆಯಲ್ಲಿ ಈ ಕೆಳಕಂಡವರು ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕು ಪಂಚಾಯತಿಗೆ ಸದಸ್ಯರಾಗಿ ಆಯ್ಕೆಯಾಗಿರುವುದಾಗಿ ಸಂಬಂಧಿಸಿದ ಚುನಾವಣಾಧಿಕಾರಿಗಳು ಘೋಷಿಸಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಕಲಂ 133 ರ ತಿದ್ದುಪಡಿ ಆದೇಶದಂತೆ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಅನುಬಂಧದ ಅಂಕಣ (4) ರಲ್ಲಿ ನಮೂದಿಸಿರುವವರು ಅಂಕಣ (2) ರಲ್ಲಿ ನಮೂದಿಸಿರುವ ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದಿಂದ ಆಯ್ಕೆಯಾಗಿರುತ್ತಾರೆ ಎಂಬುದಾಗಿ ಪ್ರಕಟಿಸಿರುತ್ತೇನೆ.

**ಅನುಬಂಧ**

**ಜಿಲ್ಲೆ : ಶಿವಮೊಗ್ಗ** **ತಾಲ್ಲೂಕು : ಭದ್ರಾವತಿ**

| ಕ್ರ. ಸಂ. | ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಮೀಸಲಿರಿಸಿದ ಸದಸ್ಯ ಸ್ಥಾನದ ವರ್ಗ | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಪಕ್ಷ |
|---|---|---|---|---|
| 1 | 2 | 3 | 4 | 5 |
| 1 | ಆನವೇರಿ | ಸಾಮಾನ್ಯ (ಮಹಿಳೆ) | ಎಂ.ಅನ್ನಪೂರ್ಣ ಕೋಂ ಎ.ಎಂ.ರಾಜಶೇಖರ್, ಆನವೇರಿ ಗ್ರಾಮ ಮತ್ತು ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |

| ಕ್ರ. ಸಂ. | ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಮೀಸಲಿರಿಸಿದ ಸದಸ್ಯ ಸ್ಥಾನದ ವರ್ಗ | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಪಕ್ಷ |
|---|---|---|---|---|
| 1 | 2 | 3 | 4 | 5 |
| 2 | ಮೈದೊಳಲು | ಹಿಂದುಳಿದ "ಅ" ವರ್ಗ | ಎಸ್.ಕೆ.ಪಟೇಲ್ ಬಿನ್ ಎಸ್.ಸಿದ್ದಪ್ಪ, ಮೈದೊಳಲು ಗ್ರಾಮ ಮತ್ತು ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 3 | ಸಿದ್ಲೀಪುರ | ಹಿಂದುಳಿದ "ಅ" ವರ್ಗ (ಮಹಿಳೆ) | ವೀಣಾ ಕೋಂ ನಿಂಗಾಚಾರ್, ಸನ್ಯಾಸಿಕೋಡಮಗ್ಗೆ ಗ್ರಾಮ ಮತ್ತು ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 4 | ಯಡೇಹಳ್ಳಿ | ಅನುಸೂಚಿತ ಜಾತಿ | ಆರ್.ಹಾಲಪ್ಪ ಬಿನ್ ರಂಗಪ್ಪ, ಯಡೇಹಳ್ಳಿ ಗ್ರಾಮ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 5 | ಹೊಳೆಹೊನ್ನೂರು | ಸಾಮಾನ್ಯ (ಮಹಿಳೆ) | ಭುವನೇಶ್ವರಿ ಕೆ.ಎನ್ ಕೋಂ ನಾಗರಾಜಪ್ಪ.ಕೆ.ಎಸ್, ಹೊಳೆಹೊನ್ನೂರು, ಹೊಳೆಹೊನ್ನೂರು ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 6 | ಕಲ್ಲಿಹಾಳು | ಹಿಂದುಳಿದ "ಅ" ವರ್ಗ (ಮಹಿಳೆ) | ಸಾಕಮ್ಮ ಕೋಂ ಮುದ್ದುವೀರಪ್ಪ.ಸಿ.ಆರ್. ತಟ್ಟೆಹಳ್ಳಿ, ಕಲ್ಲಿಹಾಳು ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 7 | ಅರಬಿಳಚಿ | ಅನುಸೂಚಿತ ಪಂಗಡ (ಮಹಿಳೆ) | ಎನ್.ಪ್ರೇಮ ಕೋಂ ಆಂಜನೇಯ ಎಂ.ಹೆಚ್., ಅರಬಿಳಚಿ ಗ್ರಾಮ, ಹೊಳೆಹೊನ್ನೂರು ಹೋಬಳಿ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 8 | ಕೂಡ್ಲಿಗೆರೆ | ಅನುಸೂಚಿತ ಜಾತಿ (ಮಹಿಳೆ) | ಗೌರಮ್ಮ ಕೋಂ ಪರಮೇಶ್ವರಪ್ಪ ಬಸಲೀಕಟ್ಟೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 9 | ಕಾಗೆಕೋಡಮಗ್ಗೆ | ಸಾಮಾನ್ಯ (ಮಹಿಳೆ) | ಜಮರುದ್ ಬಾನು ಕೋಂ ಅಸ್ಲಂ ಗೌಡರಹಳ್ಳಿ ಭದ್ರಾ ಕಾಲೋನಿ ಅಂಚೆ ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 10 | ಅರಳಿಹಳ್ಳಿ | ಅನುಸೂಚಿತ ಜಾತಿ (ಮಹಿಳೆ) | ಸೋಮ್ಲಿಬಾಯಿ ಬಿನ್ ಹರಿಶ್ಚಂದ್ರನಾಯ್ಕ ಕೊಮಾರನಹಳ್ಳಿ ದೇವರಹಳ್ಳಿ ಅಂಚೆ ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಜನತಾ ದಳ (ಜಾತ್ಯಾತೀತ) |
| 11 | ಅಂತರಗಂಗೆ | ಹಿಂದುಳಿದ "ಬ" ವರ್ಗ | ಎನ್.ಶ್ರೀನಿವಾಸ ಬಿನ್ ಕೆ.ನಂಜುಂಡಪ್ಪ, ಕೆ.ಹೆಚ್.ನಗರ ಕೊರಲಕೊಪ್ಪ ಸುಣ್ಣದಹಳ್ಳಿ ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 12 | ಮಾವಿನಕೆರೆ | ಸಾಮಾನ್ಯ (ಮಹಿಳೆ) | ಜಯಲಕ್ಷ್ಮಿ.ಬಿ ಕೋಂ:ರಮೇಶ್.ಎಂ.ಎಸ್. ಮಾವಿನಕೆರೆ ಕಾಲೋನಿ, ಮಾವಿನಕೆರೆ ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, | ಜನತಾ ದಳ (ಜಾತ್ಯಾತೀತ) |
| 13 | ಬಾರಂದೂರು | ಸಾಮಾನ್ಯ (ಮಹಿಳೆ) | ಪಾರ್ವತಿಬಾಯಿ ಕೋಂ ಶ್ರೀಧರರಾವ್ ನೆಲ್ಲೋಡೆ ಬಾರಂದೂರು ಗ್ರಾಮ ಮತ್ತು ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಜನತಾ ದಳ (ಜಾತ್ಯಾತೀತ) |
| 14 | ಕಲ್ಲಹಳ್ಳಿ | ಸಾಮಾನ್ಯ | ನಂಜುಂಡೇಗೌಡ ಬಿನ್:ಮುದ್ದೇಗೌಡ, ಕಲ್ಲಹಳ್ಳಿ, ಸಿರಿಯೂರು ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಜನತಾ ದಳ (ಜಾತ್ಯಾತೀತ) |
| 15 | ಸಿಂಗನಮನೆ | ಸಾಮಾನ್ಯ | ಗಿರೀಶ್.ಎ. ಬಿನ್:ನಾರಾಯಣ ನಾಯರ್, ಸಿಂಗನಮನೆ, ಬಿ.ಆರ್.ಪ್ರಾಜೆಕ್ಟ್, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಜನತಾ ದಳ (ಜಾತ್ಯಾತೀತ) |
| 16 | ದೊಣಬಘಟ್ಟ | ಸಾಮಾನ್ಯ | ಇಮಾಂಸಾಬ್ ಬಿನ್:ಉಸ್ಮಾನ್ ಸಾಬ್, ದೊಣಬಘಟ್ಟ ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |

| ಕ್ರ. ಸಂ. | ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಮೀಸಲಿರಿಸಿದ ಸದಸ್ಯ ಸ್ಥಾನದ ವರ್ಗ | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಪಕ್ಷ |
|---|---|---|---|---|
| 1 | 2 | 3 | 4 | 5 |
| 17 | ಹಿರಿಯೂರು | ಅನುಸೂಚಿತ ಜಾತಿ | ದೇವೇಂದ್ರನಾಯ್ಕ ಬಿನ್ ಚಂದ್ರಾನಾಯ್ಕ ಹೊಳೆಗಂಗೂರು ಡಿ.ಬಿ.ಹಳ್ಳಿ ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಜನತಾ ದಳ (ಜಾತ್ಯಾತೀತ) |
| 18 | ಹುಣಸೇಕಟ್ಟೆ | ಸಾಮಾನ್ಯ | ಶಾಂತಕುಮಾರ ಬಿನ್ ಗಂಗಾಧರಪ್ಪ ಕಂಬದಾಳ್ ಹೊಸೂರು ಅಂಚೆ ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |

**ಕೆ.ಎಸ್.ಪ್ರಭಾಕರ**
ಪ್ರಾದೇಶಿಕ ಆಯುಕ್ತರು,
ಬೆಂಗಳೂರು

# ವಿಶೇಷ ಪತ್ರಿಕೆ

| ಭಾಗ – *III* | ಬೆಂಗಳೂರು, ಬುಧವಾರ, ಜನವರಿ ೧೨, ೨೦೧೧ (ಪುಷ್ಯ ೨೨, ಶಕ ವರ್ಷ ೧೯೩೨) | ನಂ. ೩೭ |
|---|---|---|

## ಪ್ರಾದೇಶಿಕ ಆಯುಕ್ತರ ಕಾರ್ಯಾಲಯ, ಬೆಂಗಳೂರು

2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು–560 027

**ಅಧಿಸೂಚನೆ**

**ಸಂಖ್ಯೆ ಪ್ರಾಆಕ/ಚುನಾವಣೆ/ವಿವ/36–3/2010–11, ದಿನಾಂಕ 10–01–2011**

ಆಯುಕ್ತರು, ರಾಜ್ಯ ಚುನಾವಣಾ ಆಯೋಗ, ಕರ್ನಾಟಕ ಬೆಂಗಳೂರು ರವರ ಆದೇಶ ಸಂಖ್ಯೆ ರಾಚುಆ/272/ಟಿಜಡ್‌ಪಿ/2010 ದಿನಾಂಕ 06–12–2010 ರಂತೆ ತಿಳಿಸಿರುವಂತೆ ಶಿವಮೊಗ್ಗ ಜಿಲ್ಲೆಯ **ತೀರ್ಥಹಳ್ಳಿ ತಾಲ್ಲೂಕು** ಪಂಚಾಯತಿಯ ಸದಸ್ಯರ ಸ್ಥಾನಗಳಿಗೆ ದಿನಾಂಕ 26–12–2010 ರಂದು ಸಾರ್ವತ್ರಿಕ ಚುನಾವಣೆಗಳು ನಡೆದಿದ್ದು, ನಂತರ ದಿನಾಂಕ 04–01–2011 ರಂದು ನಡೆದ ಮತಗಳ ಎಣಿಕೆಯಲ್ಲಿ ಈ ಕೆಳಕಂಡವರು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕು ಪಂಚಾಯತಿಗೆ ಸದಸ್ಯರಾಗಿ ಆಯ್ಕೆಯಾಗಿರುವುದಾಗಿ ಸಂಬಂಧಿಸಿದ ಚುನಾವಣಾಧಿಕಾರಿಗಳು ಘೋಷಿಸಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಕಲಂ 133 ರ ತಿದ್ದುಪಡಿ ಆದೇಶದಂತೆ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಅನುಬಂಧದ ಅಂಕಣ (4) ರಲ್ಲಿ ನಮೂದಿಸಿರುವವರು ಅಂಕಣ (2) ರಲ್ಲಿ ನಮೂದಿಸಿರುವ ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದಿಂದ ಆಯ್ಕೆಯಾಗಿರುತ್ತಾರೆ ಎಂಬುದಾಗಿ ಪ್ರಕಟಿಸಿರುತ್ತೇನೆ.

**ಅನುಬಂಧ**

**ಜಿಲ್ಲೆ : ಶಿವಮೊಗ್ಗ** **ತಾಲ್ಲೂಕು : ತೀರ್ಥಹಳ್ಳಿ**

| ಕ್ರ. ಸಂ. | ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಮೀಸಲಿರಿಸಿದ ಸದಸ್ಯ ಸ್ಥಾನದ ವರ್ಗ | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಪಕ್ಷ |
|---|---|---|---|---|
| 1 | 2 | 3 | 4 | 5 |
| 1 | ಆಗುಂಬೆ | ಸಾಮಾನ್ಯ | ಹೊಸಳ್ಳಿ ಸುಧಾಕರ ಬಿನ್ ಹೆಚ್.ಬಿ.ಗಿಡ್ಡಯ್ಯಗೌಡ. ಬಿದರಗೋಡು. ಹೊಸಗದ್ದೆ ಅಂಚೆ ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 2 | ಆರಗ | ಸಾಮಾನ್ಯ (ಮಹಿಳೆ) | ಭಾರತಿ ಸುರೇಶ, ಕೋಂ ಸುರೇಶ್, ಹಿರೇಸರ, ಆರಗ ಅಂಚೆ. ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 3 | ಅರೇಹಳ್ಳಿ | ಸಾಮಾನ್ಯ | ಬಾಳೇಹಳ್ಳಿ ಪ್ರಭಾಕರ, ಬಿನ್ ಡಾಕಪ್ಪ ಗೌಡ, ಹನಸ, ಬಾಳೇಹಳ್ಳಿ, ಕರುಣಾಪುರ ಅಂಚೆ. ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 4 | ದೇವಂಗಿ | ಅನುಸೂಚಿತ ಜಾತಿ (ಮಹಿಳೆ) | ರೇಣುಕಾ ಕೋಂ ನಾಗಾನಾಯ್ಕ, ಮೇಲಿನಕುರುವಳ್ಳಿ, ಕುರುವಳ್ಳಿ ಅಂಚೆ. ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 5 | ಹಾದಿಗಲ್ಲು | ಹಿಂದುಳಿದ "ಅ" ವರ್ಗ | ವೆಂಕಟೇಶ ಹೆಚ್.ಆರ್. ಬಿನ್ ರಾಮಕೃಷ್ಣಪ್ಪ, ಮುನಿಯೂರು, ಹುಂಚದಕಟ್ಟೆ ಅಂಚೆ. ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 6 | ಹೊದ್ಲ ಅರಳಾಪುರ | ಸಾಮಾನ್ಯ (ಮಹಿಳೆ) | ಜೀನಾ ವಿಕ್ಟರ್ ಡಿಸೋಜ ಕೋಂ ವಿಕ್ಟರ್ ಡಿಸೋಜ ಚಿಟ್ಟೇಬೈಲು, ಹಲಸಿನಹಳ್ಳಿ ಅಂಚೆ. ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |

| ಕ್ರ. ಸಂ. | ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಮೀಸಲಿರಿಸಿದ ಸದಸ್ಯ ಸ್ಥಾನದ ವರ್ಗ | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಪಕ್ಷ |
|---|---|---|---|---|
| 1 | 2 | 3 | 4 | 5 |
| 7 | ಕನ್ನಂಗಿ | ಹಿಂದುಳಿದ "ಅ" ವರ್ಗ (ಮಹಿಳೆ) | ನಾಗರತ್ನ ಚನ್ನವೀರಪ್ಪ, ಕೋಂ ಹೆಚ್.ಎಸ್. ಚನ್ನವೀರಪ್ಪ, ಹಣಗೆರೆ ಗ್ರಾಮ, ಹಣಗೆರೆ ಅಂಚೆ. ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 8 | ಕೋಣಂದೂರು | ಸಾಮಾನ್ಯ (ಮಹಿಳೆ) | ಹೇಮಲತಾ ರಾಜು ಕೋಂ ಎಂ.ಕೆ. ವಿರುಪಾಕ್ಷ ಮುಖ್ಯ ರಸ್ತೆ ಕೋಣಂದೂರು, ಕೋಣಂದೂರು ಅಂಚೆ. ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 9 | ಮಾಳೂರು | ಹಿಂದುಳಿದ "ಅ" ವರ್ಗ (ಮಹಿಳೆ) | ಬಿಸಿಲುಮನೆ ಮೀನಾಕ್ಷಿ ರಾಮಪ್ಪ, ಕೋಂ ಕೆ.ಬಿ. ರಾಮಪ್ಪ, ಬಿಸಿಲುಮನೆ ವಾಸ, ಕಳವತ್ತಿ ಗ್ರಾಮ, ಕುಡುವಳ್ಳಿ ಅಂಚೆ. ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 10 | ಮಂಡಗದ್ದೆ | ಸಾಮಾನ್ಯ (ಮಹಿಳೆ) | ಕುಸುಮ ಕೃಷ್ಣಮೂರ್ತಿ ಎಸ್.ಎಲ್. ಕೋಂ ಕೃಷ್ಣಮೂರ್ತಿ, ಮೂವಳ್ಳಿ ವಾಸ, ಹೆಮ್ಮಕ್ಕಿ ಗ್ರಾಮ, ಸಿಂಧುವಾಡಿ ಅಂಚೆ. ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 11 | ಮೇಗರವಳ್ಳಿ | ಅನುಸೂಚಿತ ಪಂಗಡ (ಮಹಿಳೆ) | ಪ್ರೇಮ ಗಣೇಶ್ ಕೋಂ ಗಣೇಶ್, ಗಾರ್ಡರ ಗದ್ದೆ, ಹುರುಳಿ ಅಂಚೆ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 12 | ಮುಳಬಾಗಿಲು | ಸಾಮಾನ್ಯ | ಕೆಸ್ತೂರು ಮಂಜುನಾಥ ಬಿನ್ ದುಗ್ಗಪ್ಪಗೌಡ, ಕೆಸ್ತೂರು ಗ್ರಾಮ, ದೂರ್ವಾಸಪುರ ಅಂಚೆ. ತೀರ್ಥಹಳ್ಳಿ ತಾಲ್ಲೂಕ, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 13 | ಸಾಲ್ಗಡಿ | ಹಿಂದುಳಿದ "ಬ" ವರ್ಗ | ಹೆಚ್.ಎಸ್. ಕಿರಣ್ ಕಟ್ಟೆಹಕ್ಕಲು ಬಿನ್ ಸಿಂಗಪ್ಪಗೌಡ, ಹೊಸಗೇರಿ ವಾಸ, ಸಾಲ್ಗಡಿ ಗ್ರಾಮ, ಕಟ್ಟೆಹಕ್ಕಲು ಅಂಚೆ. ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |

**ಕೆ.ಎಸ್.ಪ್ರಭಾಕರ**
ಪ್ರಾದೇಶಿಕ ಆಯುಕ್ತರು,
ಬೆಂಗಳೂರು

# ವಿಶೇಷ ಪತ್ರಿಕೆ

| ಭಾಗ – *III* | ಬೆಂಗಳೂರು, ಬುಧವಾರ, ಜನವರಿ ೧೨, ೨೦೧೧ (ಪುಷ್ಯ ೨೨, ಶಕ ವರ್ಷ ೧೯೩೨) | ನಂ. ೩೮ |
|---|---|---|

## ಪ್ರಾದೇಶಿಕ ಆಯುಕ್ತರ ಕಾರ್ಯಾಲಯ, ಬೆಂಗಳೂರು

2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು–560 027

### ಅಧಿಸೂಚನೆ

### ಸಂಖ್ಯೆ ಪ್ರಾಆಕ/ಚುನಾವಣೆ/ವಿವ/36–4/2010–11, ದಿನಾಂಕ 10–01–2011

ಆಯುಕ್ತರು, ರಾಜ್ಯ ಚುನಾವಣಾ ಆಯೋಗ, ಕರ್ನಾಟಕ ಬೆಂಗಳೂರು ರವರ ಆದೇಶ ಸಂಖ್ಯೆ ರಾಚುಆ/272/ಟಿಜಡ್‌ಪಿ/2010 ದಿನಾಂಕ 06–12–2010 ರಂತೆ ತಿಳಿಸಿರುವಂತೆ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕು ಪಂಚಾಯತಿಯ ಸದಸ್ಯರ ಸ್ಥಾನಗಳಿಗೆ ದಿನಾಂಕ 26–12–2010 ರಂದು ಸಾರ್ವತ್ರಿಕ ಚುನಾವಣೆಗಳು ನಡೆದಿದ್ದು, ನಂತರ ದಿನಾಂಕ 04–01–2011 ರಂದು ನಡೆದ ಮತಗಳ ಎಣಿಕೆಯಲ್ಲಿ ಈ ಕೆಳಕಂಡವರು ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕು ಪಂಚಾಯತಿಗೆ ಸದಸ್ಯರಾಗಿ ಆಯ್ಕೆಯಾಗಿರುವುದಾಗಿ ಸಂಬಂಧಿಸಿದ ಚುನಾವಣಾಧಿಕಾರಿಗಳು ಘೋಷಿಸಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಕಲಂ 133 ರ ತಿದ್ದುಪಡಿ ಆದೇಶದಂತೆ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಅನುಬಂಧದ ಅಂಕಣ (4) ರಲ್ಲಿ ನಮೂದಿಸಿರುವವರು ಅಂಕಣ (2) ರಲ್ಲಿ ನಮೂದಿಸಿರುವ ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದಿಂದ ಆಯ್ಕೆಯಾಗಿರುತ್ತಾರೆ ಎಂಬುದಾಗಿ ಪ್ರಕಟಿಸಿರುತ್ತೇನೆ.

**ಅನುಬಂಧ**

**ಜಿಲ್ಲೆ : ಶಿವಮೊಗ್ಗ** **ತಾಲ್ಲೂಕು : ಸಾಗರ**

| ಕ್ರ. ಸಂ. | ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಮೀಸಲಿರಿಸಿದ ಸದಸ್ಯ ಸ್ಥಾನದ ವರ್ಗ | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಪಕ್ಷ |
|---|---|---|---|---|
| 1 | 2 | 3 | 4 | 5 |
| 1 | ಆನಂದಪುರ | ಸಾಮಾನ್ಯ | ಸೈಯದ್ ಇಬ್ರಾಹಿಂ ಬಿನ್ ಸೈಯದ್ ಅಮೀರ್ ಸಾಬ್ ಬಸವನಬೀದಿ, ಆನಂದಪುರ. | ಪಕ್ಷೇತರ |
| 2 | ಆವಿನಹಳ್ಳಿ | ಹಿಂದುಳಿದ "ಅ" ವರ್ಗ (ಮಹಿಳೆ) | ಶ್ಯಾಮಲಾ ಕೋಂ ದೇವರಾಜ ಕುರುವರಿ ಆವಿನಹಳ್ಳಿ (ಅಂ), | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |

| ಕ್ರ ಸಂ. | ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಮೀಸಲಿರಿಸಿದ ಸದಸ್ಯ ಸ್ಥಾನದ ವರ್ಗ | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಪಕ್ಷ |
|---|---|---|---|---|
| 1 | 2 | 3 | 4 | 5 |
| 3 | ಬರೂರು | ಸಾಮಾನ್ಯ | ಪ್ರಕಾಶ್ .ಕೆ ಬಿನ್ ಕೆರಿಯಪ್ಪ ಲಾವಿಗ್ಗೆರೆ, | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 4 | ಗೌತಮಪುರ | ಸಾಮಾನ್ಯ | ಷಣ್ಮುಖಪ್ಪ.ಕೆ. ಹೆಚ್.ಬಿನ್ ಹುಚ್ಚಪ್ಪ ಭೈರಾಪುರ, | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 5 | ಹೆಗ್ಗೋಡು | ಅನುಸೂಚಿತ ಜಾತಿ (ಮಹಿಳೆ) | ಗೌರಮ್ಮ ಕೋಂ ರಾಮಪ್ಪ ಹೊನ್ನೆಸರ, | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 6 | ಹಿರೇನೆಲ್ಲೂರು | ಸಾಮಾನ್ಯ (ಮಹಿಳೆ) | ಶ್ವೇತಾ ಉಮೇಶ ಕೋಂ ಉಮೇಶ ಕಾಗೋಡು (ವಾಸ ಮತ್ತು ಅಂಚೆ) ಸಾಗರ ತಾಲ್ಲೂಕು | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 7 | ಹೊಸೂರು | ಹಿಂದುಳಿದ "ಬ" ವರ್ಗ (ಮಹಿಳೆ) | ಜ್ಯೋತಿ ಕೋಂ ಮುರುಳೀಧರ ಹೊಸಗುಂದ, ಹೊಸಗುಂದ ಅಂಚೆ | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 8 | ಕಾನ್ಲೆ | ಸಾಮಾನ್ಯ (ಮಹಿಳೆ) | ಪ್ರೇಮರಾಮಪ್ಪ ಕೋಂ ರಾಮಪ್ಪ, ಸೈದೂರು (ವಾಸ ಮತ್ತು ಅಂಚೆ) ಸಾಗರ ತಾಲ್ಲೂಕು | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 9 | ಕೆಳದಿ | ಸಾಮಾನ್ಯ (ಮಹಿಳೆ) | ಪಾರ್ವತಿ ಹೆಚ್.ಎಂ.ಕೋಂ ಈಶ್ವರ ಮಾಲ್ವೆ ಗ್ರಾಮ (ಅಂಚೆ) ಸಾಗರ ತಾಲ್ಲೂಕು | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 10 | ತಾಳಗುಪ್ಪ | ಹಿಂದುಳಿದ "ಅ" ವರ್ಗ (ಮಹಿಳೆ) | ಸುಮಿತ್ರ ಕೆ.ಜಿ ಕೋಂ ಮಹಾಬಲೇಶ್ವರ. ಪಿ ಬಲೇಗಾರು, ವಾಸ, ಮರತ್ತೂರು ಅಂಚೆ. ಸಾಗರ ತಾಲ್ಲೂಕು | ಪಕ್ಷೇತರ |
| 11 | ತಲವಾಟ | ಅನುಸೂಚಿತ ಪಂಗಡ (ಮಹಿಳೆ) | ಗಿರಿಜಮ್ಮ ಕೋಂ ಮಹಾದೇವಪ್ಪ ಡಿ ಕಾಳಮಂಜಿ, ಲಿಂಗದಮಕ್ಕಿ ಅಂಚೆ, ಸಾಗರ ತಾಲ್ಲೂಕು | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 12 | ತ್ಯಾಗರ್ತಿ | ಸಾಮಾನ್ಯ (ಮಹಿಳೆ) | ಎಲ್.ಸರೋಜ ಕೋಂ ಆರ್.ಲಿಂಗರಾಜು ತ್ಯಾಗರ್ತಿ ವಾಸ & ಅಂಚೆ ಸಾಗರ ತಾಲ್ಲೂಕು | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 13 | ತುಮರಿ | ಹಿಂದುಳಿದ "ಅ" ವರ್ಗ | ಜಿ.ಸಿ. ಹರೀಶ್‌ಗಂಟೆ ಬಿನ್ ಚಂದ್ರಶೇಖರ ಕರೂರು ವಾಸ ಬ್ರಾಹ್ಮಣಕೆಪ್ಪಿಗೆ (ಅಂಚೆ) ಸಾಗರ ತಾಲ್ಲೂಕು | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 14 | ಯಡಜಿಗಳೇಮನೆ | ಹಿಂದುಳಿದ "ಅ" ವರ್ಗ | ಮಹಾಬಲೇಶ್ವರ ಕುಗ್ವೆ, ಕುಗ್ವೆ ಸಾಗರ ತಾಲ್ಲೂಕು | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |

**ಕೆ.ಎಸ್.ಪ್ರಭಾಕರ**
ಪ್ರಾದೇಶಿಕ ಆಯುಕ್ತರು,
ಬೆಂಗಳೂರು

# ವಿಶೇಷ ಪತ್ರಿಕೆ

| ಭಾಗ – *III* | ಬೆಂಗಳೂರು, ಬುಧವಾರ, ಜನವರಿ ೧೨, ೨೦೧೧ (ಪುಷ್ಯ ೨೨, ಶಕ ವರ್ಷ ೧೯೩೨) | ನಂ. ೩೯ |
|---|---|---|

**ಪ್ರಾದೇಶಿಕ ಆಯುಕ್ತರ ಕಾರ್ಯಾಲಯ, ಬೆಂಗಳೂರು**

2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು-560 027

**ಅಧಿಸೂಚನೆ**

**ಸಂಖ್ಯೆ ಪ್ರಾಆಕ/ಚುನಾವಣೆ/ವಿವ/36-5/2010-11, ದಿನಾಂಕ 10-01-2011**

ಆಯುಕ್ತರು, ರಾಜ್ಯ ಚುನಾವಣಾ ಆಯೋಗ, ಕರ್ನಾಟಕ ಬೆಂಗಳೂರು ರವರ ಆದೇಶ ಸಂಖ್ಯೆ ರಾಚುಆ/272/ಟಿಜಡ್‌ಪಿ/2010 ದಿನಾಂಕ 06-12-2010 ರಂತೆ ತಿಳಿಸಿರುವಂತೆ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕು ಪಂಚಾಯತಿಯ ಸದಸ್ಯರ ಸ್ಥಾನಗಳಿಗೆ ದಿನಾಂಕ 26-12-2010 ರಂದು ಸಾರ್ವತ್ರಿಕ

ಚುನಾವಣೆಗಳು ನಡೆದಿದ್ದು, ನಂತರ ದಿನಾಂಕ 04–01–2011 ರಂದು ನಡೆದ ಮತಗಳ ಎಣಿಕೆಯಲ್ಲಿ ಈ ಕೆಳಕಂಡವರು ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕು ಪಂಚಾಯತಿಗೆ ಸದಸ್ಯರಾಗಿ ಆಯ್ಕೆಯಾಗಿರುವುದಾಗಿ ಸಂಬಂಧಿಸಿದ ಚುನಾವಣಾಧಿಕಾರಿಗಳು ಘೋಷಿಸಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಕಲಂ 133 ರ ತಿದ್ದುಪಡಿ ಆದೇಶದಂತೆ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಅನುಬಂಧದ ಅಂಕಣ (4) ರಲ್ಲಿ ನಮೂದಿಸಿರುವವರು ಅಂಕಣ (2) ರಲ್ಲಿ ನಮೂದಿಸಿರುವ ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದಿಂದ ಆಯ್ಕೆಯಾಗಿರುತ್ತಾರೆ ಎಂಬುದಾಗಿ ಪ್ರಕಟಿಸಿರುತ್ತೇನೆ.

**ಅನುಬಂಧ**

**ಜಿಲ್ಲೆ : ಶಿವಮೊಗ್ಗ** **ತಾಲ್ಲೂಕು : ಸೊರಬ**

| ಕ್ರ. ಸಂ. | ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಮೀಸಲಿರಿಸಿದ ಸದಸ್ಯ ಸ್ಥಾನದ ವರ್ಗ | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಪಕ್ಷ |
|---|---|---|---|---|
| 1 | 2 | 3 | 4 | 5 |
| 1 | ಶಕುನವಳ್ಳಿ | ಸಾಮಾನ್ಯ | ಬಸವಲಿಂಗಪ್ಪ ಹೆಚ್.ಎಂ.ಬಿನ್ ಮಲ್ಲಪ್ಪ ಲಕ್ಕವಳ್ಳಿ, ಕುಬಟೂರು ಅಂಚೆ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 2 | ಅಗಸನಹಳ್ಳಿ | ಅನುಸೂಚಿತ ಪಂಗಡ (ಮಹಿಳೆ) | ಮೀನಾಕ್ಷಮ್ಮ ಬಿ.ಸಿ ಕೋಂ ಭೀಮಪ್ಪ ಚಿಕ್ಕಮ್ಮರ್, ಮೂಡಿ ಗ್ರಾಮ ಮತ್ತು ಅಂಚೆ ಆನವಟ್ಟಿ ಹೋಬಳಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 3 | ಭಾರಂಗಿ | ಅನುಸೂಚಿತ ಜಾತಿ | ಈರಪ್ಪ ಬಿನ್ ಕರವಾಳಪ್ಪ ಗಿಣಿವಾಲ ಗ್ರಾಮ ಭಾರಂಗಿ ಅಂಚೆ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 4 | ಎಣ್ಣೆಕೊಪ್ಪ | ಸಾಮಾನ್ಯ (ಮಹಿಳೆ) | ಹೇಮಾವತಿ ಆರ್.ಕೆ ಕೋಂ ರುದ್ರಪ್ಪ, ಕಮನವಳ್ಳಿ, ಎಣ್ಣೆಕೊಪ್ಪ ಅಂಚೆ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 5 | ಆನವಟ್ಟಿ | ಸಾಮಾನ್ಯ (ಮಹಿಳೆ) | ವಿಶಾಲ.ಡಿ ಕೋಂ ದಯಾನಂದ ಗೌಡ, ಆನವಟ್ಟಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 6 | ಕುಬಟೂರು | ಅನುಸೂಚಿತ ಜಾತಿ | ಪರಮೇಶ್ವರಪ್ಪ ಎಸ್ ಬಿನ್ ಸಿದ್ದಪ್ಪ, ಬೆನ್ನೂರು, ಕೆರೆಹಳ್ಳಿ ಅಂಚೆ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 7 | ತೆಲಗುಂದ | ಸಾಮಾನ್ಯ | ಸದಾನಂದಗೌಡ ಬಿನ್ ಬಂಗಾರಪ್ಪಗೌಡ ಬಿಳಗಲಿ ಗ್ರಾಮ ಶಕುನವಳ್ಳಿ ಅಂಚೆ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 8 | ಜಡೆ | ಹಿಂದುಳಿದ "ಅ" ವರ್ಗ (ಮಹಿಳೆ) | ಜಯಮ್ಮ ಕೋಂ ಸುರೇಶ ಚಗಟೂರು ಗ್ರಾಮ, ಜಡೆ ಅಂಚೆ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 9 | ಹರೀಶಿ | ಸಾಮಾನ್ಯ (ಮಹಿಳೆ) | ಮಧುರಾ .ಶ್ರೀನಿವಾಸ. ಭಟ್, ಹರೀಶಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 10 | ಕುಪ್ಪಗಡ್ಡೆ | ಹಿಂದುಳಿದ "ಅ" ವರ್ಗ (ಮಹಿಳೆ) | ಲಕ್ಷ್ಮೀ.ಜೆ ಕುಪ್ಪಗಡ್ಡೆ ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಜನತಾ ದಳ (ಜಾತ್ಯಾತೀತ) |
| 11 | ತತ್ತೂರು | ಸಾಮಾನ್ಯ | ಜೈಶೀಲಪ್ಪ ಗುಡುಗಿನಕೊಪ್ಪ ಅಂಚೆ ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 12 | ಉದ್ರಿ | ಅನುಸೂಚಿತ ಜಾತಿ (ಮಹಿಳೆ) | ನಾಗರತ್ನಮ್ಮ ಕೋಂ ಪಕ್ಕೀರಪ್ಪ ಉದ್ರಿ (ಅಂಚೆ) ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 13 | ಚಂದ್ರಗುತ್ತಿ | ಸಾಮಾನ್ಯ (ಮಹಿಳೆ) | ವನಜಾಕ್ಷಿ ಪರಮೇಶ್ವರಪ್ಪ ಗುಂಜನೂರು ಗ್ರಾಮ, ಹೆಚ್ಚೆ ಅಂಚೆ ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಜನತಾ ದಳ (ಜಾತ್ಯಾತೀತ) |

| ಕ್ರ. ಸಂ. | ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಮೀಸಲಿರಿಸಿದ ಸದಸ್ಯ ಸ್ಥಾನದ ವರ್ಗ | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಪಕ್ಷ |
|---|---|---|---|---|
| 1 | 2 | 3 | 4 | 5 |
| 14 | ಹಳೇಸೊರಬ | ಹಿಂದುಳಿದ "ಬ" ವರ್ಗ | ಕಕ್ಕರಸಿ ವೀರಭದ್ರಪ್ಪಗೌಡ<br>ಸಾರೆಕೊಪ್ಪ ಗ್ರಾಮ, ಗುಡವಿ (ಅಂಚೆ)<br>ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಜನತಾ ದಳ (ಜಾತ್ಯಾತೀತ) |
| 15 | ಮಾವಲಿ | ಅನುಸೂಚಿತ ಜಾತಿ (ಮಹಿಳೆ) | ನೀಲಮ್ಮ ಸುರೇಶ್<br>ಬಿಳುವಾಣಿ ಗ್ರಾಮ ಬಿಳವಾಣಿ (ಅಂಚೆ)<br>ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 16 | ಶಿಗ್ಗಾ | ಸಾಮಾನ್ಯ (ಮಹಿಳೆ) | ರಾಜೇಶ್ವರಿ.ರಾಜಪ್ಪ ಮಾಸ್ತರ್<br>ಹೆಸರಿ ಗ್ರಾಮ ,ಶಿಗ್ಗಾ(ಅಂಚೆ)<br>ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಜನತಾ ದಳ (ಜಾತ್ಯಾತೀತ) |
| 17 | ಹೊಸಬಾಳೆ | ಸಾಮಾನ್ಯ | ಅಜ್ಜಪ್ಪ.ಕೆ ಕೂಸರಗುಪ್ಪೆ, ಹೊಸಬಾಳೆ (ಅಂಚೆ)<br>ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಜನತಾ ದಳ (ಜಾತ್ಯಾತೀತ) |
| 18 | ಉಳವಿ | ಹಿಂದುಳಿದ "ಅ" ವರ್ಗ | ನಿಂಗಪ್ಪ. ಬರಿಗೆ ಬಿ<br>ಬರಗಿ ಗ್ರಾಮ, ಬಿ ದೊಡ್ಡೇರಿ (ಅಂಚೆ)<br>ಉಳವಿ ಹೋಬಳಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಜನತಾ ದಳ (ಜಾತ್ಯಾತೀತ) |

**ಕೆ.ಎಸ್.ಪ್ರಭಾಕರ**
ಪ್ರಾದೇಶಿಕ ಆಯುಕ್ತರು,
ಬೆಂಗಳೂರು

# ವಿಶೇಷ ಪತ್ರಿಕೆ

| ಭಾಗ – *III* | ಬೆಂಗಳೂರು, ಬುಧವಾರ, ಜನವರಿ ೧೨, ೨೦೧೧ (ಪುಷ್ಯ ೨೨, ಶಕ ವರ್ಷ ೧೯೩೨) | ನಂ. ೪೦ |
|---|---|---|

## ಪ್ರಾದೇಶಿಕ ಆಯುಕ್ತರ ಕಾರ್ಯಾಲಯ, ಬೆಂಗಳೂರು

2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು–560 027

**ಅಧಿಸೂಚನೆ**

**ಸಂಖ್ಯೆ ಪ್ರಾಆಕ/ಚುನಾವಣೆ/ವಿವ/36–6/2010–11, ದಿನಾಂಕ 10–01–2011**

ಆಯುಕ್ತರು, ರಾಜ್ಯ ಚುನಾವಣಾ ಆಯೋಗ, ಕರ್ನಾಟಕ ಬೆಂಗಳೂರು ರವರ ಆದೇಶ ಸಂಖ್ಯೆ ರಾಚುಆ/272/ಟಿಜಡ್‌ಪಿ/2010 ದಿನಾಂಕ 06–12–2010 ರಂತೆ ತಿಳಿಸಿರುವಂತೆ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕು ಪಂಚಾಯತಿಯ ಸದಸ್ಯರ ಸ್ಥಾನಗಳಿಗೆ ದಿನಾಂಕ 26–12–2010 ರಂದು ಸಾರ್ವತ್ರಿಕ ಚುನಾವಣೆಗಳು ನಡೆದಿದ್ದು, ನಂತರ ದಿನಾಂಕ 04–01–2011 ರಂದು ನಡೆದ ಮತಗಳ ಎಣಿಕೆಯಲ್ಲಿ ಈ ಕೆಳಕಂಡವರು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕು ಪಂಚಾಯತಿಗೆ ಸದಸ್ಯರಾಗಿ ಆಯ್ಕೆಯಾಗಿರುವುದಾಗಿ ಸಂಬಂಧಿಸಿದ ಚುನಾವಣಾಧಿಕಾರಿಗಳು ಘೋಷಿಸಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಕಲಂ 133 ರ ತಿದ್ದುಪಡಿ ಆದೇಶದಂತೆ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಅನುಬಂಧದ ಅಂಕಣ (4) ರಲ್ಲಿ ನಮೂದಿಸಿರುವವರು ಅಂಕಣ (2) ರಲ್ಲಿ ನಮೂದಿಸಿರುವ ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದಿಂದ ಆಯ್ಕೆಯಾಗಿರುತ್ತಾರೆ ಎಂಬುದಾಗಿ ಪ್ರಕಟಿಸಿರುತ್ತೇನೆ.

**ಅನುಬಂಧ**

**ಜಿಲ್ಲೆ : ಶಿವಮೊಗ್ಗ** **ತಾಲ್ಲೂಕು : ಶಿಕಾರಿಪುರ**

| ಕ್ರ. ಸಂ. | ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಮೀಸಲಿರಿಸಿದ ಸದಸ್ಯ ಸ್ಥಾನದ ವರ್ಗ | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಪಕ್ಷ |
|---|---|---|---|---|
| 1 | 2 | 3 | 4 | 5 |
| 1 | ಈಸೂರು | ಸಾಮಾನ್ಯ (ಮಹಿಳೆ) | ಸರೋಜಮ್ಮ<br>ಗಾಮ ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 2 | ಹಾರೋಗೊಪ್ಪ | ಅನುಸೂಚಿತ ಪಂಗಡ (ಮಹಿಳೆ) | ಗೌರಮ್ಮ ವೆಂಕಟಪ್ಪ<br>ಭದ್ರಾಪುರ, ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 3 | ಹಿತ್ತಲ | ಸಾಮಾನ್ಯ (ಮಹಿಳೆ) | ಕರಿಬಸಮ್ಮ ಸಂಗಪ್ಪ<br>ಕಲ್ಮನೆ ಗ್ರಾಮ, ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |

| ಕ್ರ. ಸಂ. | ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಮೀಸಲಿರಿಸಿದ ಸದಸ್ಯ ಸ್ಥಾನದ ವರ್ಗ | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಪಕ್ಷ |
|---|---|---|---|---|
| 1 | 2 | 3 | 4 | 5 |
| 4 | ಸಾಲೂರು | ಅನುಸೂಚಿತ ಜಾತಿ (ಮಹಿಳೆ) | ಸುಜಾತ ಜಯನಾಯ್ಕ ಸಾಲೂರು ಅಂಚೆ ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 5 | ಹೊಸೂರು | ಹಿಂದುಳಿದ "ಅ" ವರ್ಗ ಮಹಿಳೆ | ಲೀಲಾವತಿ ಲಕ್ಷ್ಮಣ ಕೆಂಗಟ್ಟೆ ಗ್ರಾಮ ಮುದ್ದನಹಳ್ಳಿ ಅಂಚೆ ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 6 | ಕಾಗಿನೆಲ್ಲಿ | ಅನುಸೂಚಿತ ಜಾತಿ | ಬಿ.ಕೆ ಲಕ್ಷ್ಮಣನಾಯ್ಕ ಬಳೂರು ಗ್ರಾಮ ಕಾಗಿನೆಲ್ಲಿ ಅಂಚೆ ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 7 | ಮಾರವಳ್ಳಿ | ಸಾಮಾನ್ಯ | ಎಸ್.ಹನುಮಂತಪ್ಪ ಸಂಕ್ಲಾಪುರ ಗ್ರಾಮ ಬಗನಕಟ್ಟೆ ಅಂಚೆ ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 8 | ಕಪ್ಪನಹಳ್ಳಿ | ಅನುಸೂಚಿತ ಜಾತಿ | ಡಿ.ಆರ್ ತಿಮ್ಮಪ್ಪ ಶೆಟ್ಟಿಹಳ್ಳಿ ಗ್ರಾಮ ಅಮಟೆಕೊಪ್ಪ ಅಂಚೆ ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 9 | ಅಂಬಾರಕೊಪ್ಪ | ಸಾಮಾನ್ಯ (ಮಹಿಳೆ) | ಜಯಮ್ಮ ನಾಗಪ್ಪ ಅಂಬಾರಗೊಪ್ಪ ಗ್ರಾಮ, ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 10 | ಮತ್ತಿಕೋಟೆ | ಹಿಂದುಳಿದ "ಬ" ವರ್ಗ | ಟಿ.ರೇವಣಸಿದ್ದಪ್ಪ (ರವಿ) ಮತ್ತಿಕೋಟೆ (ಪೋ), ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 11 | ತಾಳಗುಂದ | ಸಾಮಾನ್ಯ | ಈಶ್ವರಪ್ಪ. ಜೆ. ಜಾವಗಟ್ಟೇರ ಜಾವಗಟ್ಟೆ ಗ್ರಾಮ ಬಳ್ಳಿಗಾವಿ (ಪೋ), ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 12 | ಬಿಳಕಿ | ಸಾಮಾನ್ಯ (ಮಹಿಳೆ) | ಜ್ಯೋತಿ ರಮೇಶ್ ಬಸವನಂದಿಹಳ್ಳಿ ಗ್ರಾಮ ಬಳ್ಳಿಗಾವಿ (ಪೋ), ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 13 | ಸುಣ್ಣದಕೊಪ್ಪ | ಅನುಸೂಚಿತ ಜಾತಿ (ಮಹಿಳೆ) | ಸವಿತ ಶಿವಕುಮಾರನಾಯ್ಕ ಬಿದರಿಕೊಪ್ಪ ತಾಂಡ, ತಡಸನಹಳ್ಳಿ (ಅಂಚೆ), ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 14 | ತೊಗರ್ಸಿ | ಸಾಮಾನ್ಯ (ಮಹಿಳೆ) | ಅನುಸೂಯಾ ಗೋಪಾಲಪ್ಪ ಹರಿಗಿ (ಪೋ), ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 15 | ಉಡುಗಣಿ | ಹಿಂದುಳಿದ "ಅ" ವರ್ಗ (ಮಹಿಳೆ) | ಅನುಸೂಯಾ ಬಸವರಾಜಪ್ಪ ಕೆ.ಜಿ ಕುಸ್ಕೂರು ಗ್ರಾಮ ಕುಸ್ಕೂರು (ಅಂಚೆ), ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 16 | ಮಲ್ಲೇನಹಳ್ಳಿ | ಸಾಮಾನ್ಯ | ವೀರಬಸಪ್ಪ ಚಿಕ್ಕಮಾಗಡಿ ಚಿಕ್ಕಮಾಗಡಿ ಗ್ರಾಮ, ಎಳಗೆರೆ (ಪೋ) ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 17 | ಚಿಕ್ಕಜಂಬೂರು | ಸಾಮಾನ್ಯ | ಕೆ.ಎಸ್.ವೀರನಗೌಡ ಹಿರೇಜಂಬೂರು (ಪೋ) ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |

**ಕೆ.ಎಸ್.ಪ್ರಭಾಕರ**
ಪ್ರಾದೇಶಿಕ ಆಯುಕ್ತರು,
ಬೆಂಗಳೂರು

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಬುಧವಾರ, ಜನವರಿ ೧೨, ೨೦೧೧ (ಪುಷ್ಯ ೨೨, ಶಕ ವರ್ಷ ೧೯೩೨) | ನಂ. ೪೧ |
|---|---|---|

## ಪ್ರಾದೇಶಿಕ ಆಯುಕ್ತರ ಕಾರ್ಯಾಲಯ, ಬೆಂಗಳೂರು

2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು–560 027

### ಅಧಿಸೂಚನೆ

**ಸಂಖ್ಯೆ ಪ್ರಾಆಕ/ಚುನಾವಣೆ/ವಿವ/36–7/2010–11, ದಿನಾಂಕ 10–01–2011**

ಆಯುಕ್ತರು, ರಾಜ್ಯ ಚುನಾವಣಾ ಆಯೋಗ, ಕರ್ನಾಟಕ ಬೆಂಗಳೂರು ರವರ ಆದೇಶ ಸಂಖ್ಯೆ ರಾಚುಆ/272/ಟಿಜಡ್‌ಪಿ/2010 ದಿನಾಂಕ 06–12–2010 ರಂತೆ ತಿಳಿಸಿರುವಂತೆ ಶಿವಮೊಗ್ಗ ಜಿಲ್ಲೆಯ **ಹೊಸನಗರ** ತಾಲ್ಲೂಕು ಪಂಚಾಯತಿಯ ಸದಸ್ಯರ ಸ್ಥಾನಗಳಿಗೆ ದಿನಾಂಕ 26–12–2010 ರಂದು ಸಾರ್ವತ್ರಿಕ ಚುನಾವಣೆಗಳು ನಡೆದಿದ್ದು, ನಂತರ ದಿನಾಂಕ 04–01–2011 ರಂದು ನಡೆದ ಮತಗಳ ಎಣಿಕೆಯಲ್ಲಿ ಈ ಕೆಳಕಂಡವರು ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕು ಪಂಚಾಯತಿಗೆ ಸದಸ್ಯರಾಗಿ ಆಯ್ಕೆಯಾಗಿರುವುದಾಗಿ ಸಂಬಂಧಿಸಿದ ಚುನಾವಣಾಧಿಕಾರಿಗಳು ಘೋಷಿಸಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಕಲಂ 133 ರ ತಿದ್ದುಪಡಿ ಆದೇಶದಂತೆ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಅನುಬಂಧದ ಅಂಕಣ (4) ರಲ್ಲಿ ನಮೂದಿಸಿರುವವರು ಅಂಕಣ (2) ರಲ್ಲಿ ನಮೂದಿಸಿರುವ ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದಿಂದ ಆಯ್ಕೆಯಾಗಿರುತ್ತಾರೆ ಎಂಬುದಾಗಿ ಪ್ರಕಟಿಸಿರುತ್ತೇನೆ.

**ಅನುಬಂಧ**

**ಜಿಲ್ಲೆ : ಶಿವಮೊಗ್ಗ** **ತಾಲ್ಲೂಕು : ಹೊಸನಗರ**

| ಕ್ರ. ಸಂ. | ತಾಲ್ಲೂಕು ಪಂಚಾಯತಿ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಮೀಸಲಿರಿಸಿದ ಸದಸ್ಯ ಸ್ಥಾನದ ವರ್ಗ | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಪಕ್ಷ |
|---|---|---|---|---|
| 1 | 2 | 3 | 4 | 5 |
| 1 | ಅರಸಾಳು | ಸಾಮಾನ್ಯ | ಯಶಸ್ವಿ. ಎಸ್.ವೈ ಯಾನೆ ವೀರೇಶ ಬಿನ್ ಯೋಗೇಂದ್ರಪ್ಪಗೌಡ, ಆಲುವಳ್ಳಿ ಕೆಂಚನಾಲ–ಅಂಚೆ, ಹೊಸನಗರ ತಾಲ್ಲೂಕು ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 2 | ಹೆದ್ದಾರಿಪುರ | ಸಾಮಾನ್ಯ (ಮಹಿಳೆ) | ಗೀತಮ್ಮ ಕೋಂ ನಿಂಗಪ್ಪ ಎಡಗುಡ್ಡೆ ಕೊಳವಳ್ಳಿ ಕೋಟೆತಾರಿಗ–ಅಂಚೆ ಹೊಸನಗರ ತಾಲ್ಲೂಕು ಶಿವಮೊಗ್ಗ ಜಿಲ್ಲೆ. | ಪಕ್ಷೇತರ |
| 3 | ಹುಂಚಾ | ಸಾಮಾನ್ಯ (ಮಹಿಳೆ) | ಪೂರ್ಣಿಮಾ ಜಿ ಕೋಂ ಮೂರ್ತಿರಾವ್ ಕೆ.ಎನ್ ಕೊಳಗಿ ಸೊನಲೆ–ಅಂಚೆ ಹೊಸನಗರ ತಾಲ್ಲೂಕು ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 4 | ಜೇನಿ | ಅನುಸೂಚಿತ ಜಾತಿ (ಮಹಿಳೆ) | ಶಾಂತಮ್ಮ ಕೋಂ ಶೇಖರಪ್ಪ ಕೆ.ಬಿ ಜಯನಗರ ಜಯನಗರ–ಅಂಚೆ ಹೊಸನಗರ ತಾಲ್ಲೂಕು ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 5 | ಖೈರಗುಂದ | ಸಾಮಾನ್ಯ | ಬಿ.ಇ.ಮಂಜುನಾಥ ಗೌಡ ಬಿನ್ ಈಶ್ವರಗೌಡ ಸುಳುಗೋಡು ಯಡೂರು ಅಂಚೆ ಹೊಸನಗರ ತಾಲ್ಲೂಕು ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 6 | ಕಳೂರು | ಹಿಂದುಳಿದ "ಅ" ವರ್ಗ (ಮಹಿಳೆ) | ಜಯಲಕ್ಷ್ಮಿ ಕೋಂ ವೆಂಕಟೇಶಆಚಾರ್ ಹೊಸಮನೆ ಮುಣಚೆ ಹೊಸನಗರ ತಾಲ್ಲೂಕು ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 7 | ಕೋಡೂರು | ಸಾಮಾನ್ಯ | ಕೆ.ಎಸ್ ಕುಬೇರ ಬಿನ್ ಸುಬ್ಬನಾಯ್ಕ ಹೆಚ್.ಕುನ್ನೂರು ಕೋಡೂರು–ಅಂಚೆ ಹೊಸನಗರ ತಾಲ್ಲೂಕು ಶಿವಮೊಗ್ಗ ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |
| 8 | ಮಾರುತೀಪುರ | ಹಿಂದುಳಿದ "ಅ" ವರ್ಗ (ಮಹಿಳೆ) | ನಿರ್ಮಲ ಕೋಂ ಗಣೇಶ ಕೆ ನಿರೇರಿ ಮಾರುತೀಪುರ ಹೊಸನಗರ ತಾಲ್ಲೂಕು ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 9 | ಮೂಡುಗೊಪ್ಪ | ಹಿಂದುಳಿದ "ಬ" ವರ್ಗ | ಸುಮ ಕೋಂ ಸುಬ್ರಹ್ಮಣ್ಯ ಮಳಲಿ ಚಕ್ರನಗರ–ಅಂಚೆ ಹೊಸನಗರ ತಾಲ್ಲೂಕು ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 10 | ನಿಟ್ಟೂರು | ಅನುಸೂಚಿತ ಪಂಗಡ (ಮಹಿಳೆ) | ಮಲ್ಲಿಕಾಸುರೇಂದ್ರ ಬಿನ್ ಕೆ.ಬಿ.ಸುರೇಂದ್ರ ಕಲ್ಯಾಣಿಚೌಕ ನಾಗೋಡಿ– ನಿಟ್ಟೂರು–ಅಂಚೆ ಹೊಸನಗರ ತಾಲ್ಲೂಕು ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |
| 11 | ರಿಪ್ಪನ್‌ಪೇಟೆ | ಸಾಮಾನ್ಯ (ಮಹಿಳೆ) | ನಾಗರತ್ನ ಕೋಂ ದೇವರಾಜ ಕೆರೆಹಳ್ಳಿ ರಿಪ್ಪನ್ ಪೇಟೆ–ಅಂಚೆ ಹೊಸನಗರ ತಾಲ್ಲೂಕು ಶಿವಮೊಗ್ಗ ಜಿಲ್ಲೆ. | ಭಾರತೀಯ ಜನತಾ ಪಕ್ಷ |

**ಕೆ.ಎಸ್.ಪ್ರಭಾಕರ**
ಪ್ರಾದೇಶಿಕ ಆಯುಕ್ತರು,
ಬೆಂಗಳೂರು

# ವಿಶೇಷ ಪತ್ರಿಕೆ

| | | |
|---|---|---|
| ಭಾಗ – **IV-A** | ಬೆಂಗಳೂರು, ಬುಧವಾರ, ಜನವರಿ ೧೨, ೨೦೧೧ (ಪುಷ್ಯ ೨೨, ಶಕ ವರ್ಷ ೧೯೩೨) | ನಂ. ೪೨ |

## *PERSONNEL AND ADMINISTRATIVE REFORMS SECRETARIAT*

### *NOTIFICATION*

***No. DPAR:55:RTI:2009 (1), Bangalore, Dated: 12th January, 2011***

In exercise of the powers conferred on me by sub-section(3) of Section 15 of the Right to Information Act, 2005 (Central Act No. 22 of 2005) ***I H.R.Bhardwaj***, Governor of Karnataka, do hereby appoint ***Shri A.K.M.Nayak***, Rtd. Additional Chief Secretary and former Chairman Karnataka Urban Infrastructure Development and Finance Corporation, Bangalore as the State Chief Information Commissioner in the Karnataka Information Commission.

The term of office of the Commissioner shall be five years from the date on which he assumes his office or until he attains the age of 65 years which ever is earlier as provided under section 16(1) of the Act.

Sd/-

***(H.R.Bhardwaj)***

Governor of Karnataka

By order and in the name of the Governor of Karnataka,

***L.VENKATAGIRIYAPPA***
Under Secretary to Government
DPAR (Janaspandana Cell – RTI)

# ವಿಶೇಷ ಪತ್ರಿಕೆ

| | | |
|---|---|---|
| ಭಾಗ – **IV-A** | ಬೆಂಗಳೂರು, ಬುಧವಾರ, ಜನವರಿ ೧೨, ೨೦೧೧ (ಪುಷ್ಯ ೨೨, ಶಕ ವರ್ಷ ೧೯೩೨) | ನಂ. ೪೩ |

## *PERSONNEL AND ADMINISTRATIVE REFORMS SECRETARIAT*

### *NOTIFICATION*

***No. DPAR:55:RTI:2009 (2), Bangalore, Dated: 12th January, 2011***

In exercise of the powers conferred on me by sub-section (3) of Section 15 of the Right to Information Act, 2005 (Central Act No. 22 of 2005) I ***H.R.Bhardwaj***, Governor of Karnataka, do hereby appoint following persons as State Information Commissioners in the Karnataka Information Commission.

1. Shri. D. Thangaraj
   Rtd. Principal Secretary to Government
2. Shri. M.R. Pujar
   Rtd. IGP & Additional Commissioner of Police
3. Shri. T. Rama Naik
   Advocate, Shikaripura
4. Dr. Shekhar D. Sajjanar
   Surgeon by profession & Social Worker, Gadag

The term of office of the Commissioners shall be five years from the date on which they assume their office or until they attains the age of 65 years whichever is earlier as provided under section 16(1) of the Act.

Sd/-

***(H.R.Bhardwaj)***

Governor of Karnataka

By order and in the name of the Governor of Karnataka,

***L.VENKATAGIRIYAPPA***

Under Secretary to Government
DPAR (Janaspandana Cell – RTI)

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕವಿಪ:ಶಾರಶಾ:ವಿಪವಿ 01:2011, ಬೆಂಗಳೂರು, ದಿನಾಂಕ: 12ನೇ ಜನವರಿ, 2011**

ಈ ಮುಂದಿನ ವಿಧೇಯಕವನ್ನು ವಿಧಾನ ಪರಿಷತ್ತಿನಲ್ಲಿ ದಿನಾಂಕ: 12ನೇ ಜನವರಿ 2011 ರಂದು ಮಂಡಿಸಲಾಯಿತು.

**"ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ವೈದ್ಯಾಧಿಕಾರಿಗಳು ಮತ್ತು ಇತರ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ವಿಧೇಯಕ, 2011"**

**ಕರ್ನಾಟಕ ವಿಧಾನ ಪರಿಷತ್ತು**

**ನೂರ ಹದಿನಾಲ್ಕನೇ ಅಧಿವೇಶನ**

**ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ವೈದ್ಯಾಧಿಕಾರಿಗಳು ಮತ್ತು ಇತರ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ವಿಧೇಯಕ, 2011**

**(2011ರ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ 01)**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳು ಮತ್ತು ಇತರ ಸಿಬ್ಬಂದಿಯ ವರ್ಗಾವಣೆಯನ್ನು ನಿಯಂತ್ರಿಸಿ, ಗ್ರಾಮೀಣ ಪ್ರದೇಶಗಳಲ್ಲಿನ ಸರ್ಕಾರಿ ಆಸ್ಪತ್ರೆಗಳಲ್ಲಿ ವೈದ್ಯಾಧಿಕಾರಿಗಳು ಮತ್ತು ಇತರ ಸಿಬ್ಬಂದಿಯು ಲಭ್ಯವಾಗುವಂತೆ ಮಾಡುವುದಕ್ಕಾಗಿ ಉಪಬಂಧ ಕಲ್ಪಿಸಲು ಒಂದು ವಿಧೇಯಕ.

ವೈದ್ಯಾಧಿಕಾರಿಗಳು ಮತ್ತು ಇತರ ಸಿಬ್ಬಂದಿಯ ವರ್ಗಾವಣೆಯನ್ನು ನಿಯಂತ್ರಿಸಿ, ಗ್ರಾಮೀಣ ಪ್ರದೇಶಗಳಲ್ಲಿನ ಸರ್ಕಾರಿ ಆಸ್ಪತ್ರೆಗಳಲ್ಲಿ ವೈದ್ಯಾಧಿಕಾರಿಗಳು ಮತ್ತು ಇತರ ಸಿಬ್ಬಂದಿಯು ಲಭ್ಯವಾಗುವಂತೆ ಮಾಡುವುದಕ್ಕಾಗಿ ಮತ್ತು ಅದಕ್ಕೆ ಸಂಬಂಧಿಸಿದ ಅಥವಾ ಅವುಗಳಿಗೆ ಪ್ರಾಸಂಗಿಕವಾದ ವಿಷಯಗಳಿಗಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು **ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ವೈದ್ಯಾಧಿಕಾರಿಗಳು ಮತ್ತು ಇತರ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2011** ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.**– ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) **"ನೇಮಕ"** ಎಂದರೆ, ನೇರ ನೇಮಕಾತಿ ಮೂಲಕ ಅಥವಾ ವಿಲೀನಗೊಳಿಸುವ ಮೂಲಕ ಅಥವಾ ಬಡ್ತಿಯ ಮೂಲಕ ಅಥವಾ ವೃಂದ ಬದಲಾವಣೆಯ ಮೂಲಕ ಮಾಡಿದ ವೈದ್ಯಾಧಿಕಾರಿ ಅಥವಾ ಇತರ ಸಿಬ್ಬಂದಿಯ ನೇಮಕ;

(ಬಿ) **"ನೇಮಕಾತಿ ಪ್ರಾಧಿಕಾರ"** ಎಂದರೆ, ಸಂಬಂಧಿಸಿದ ವೃಂದಗಳಿಗೆ ನೇಮಕ ಮಾಡಲು ಸಕ್ಷಮವಾದ ಪ್ರಾಧಿಕಾರ;

(ಸಿ) **"ಸಕ್ಷಮ ಪ್ರಾಧಿಕಾರ"** ಎಂದರೆ, ವೈದ್ಯಾಧಿಕಾರಿ ಅಥವಾ ಇತರ ಸಿಬ್ಬಂದಿಯ ವರ್ಗಾವಣೆ ಆದೇಶಗಳನ್ನು ಹೊರಡಿಸಲು ಸಕ್ಷಮವಾದ ಪ್ರಾಧಿಕಾರ;

(ಡಿ) **"ಸರ್ಕಾರ"** ಎಂದರೆ, ಕರ್ನಾಟಕ ಸರ್ಕಾರ;

(ಇ) **"ಸರ್ಕಾರಿ ಆಸ್ಪತ್ರೆ"** ಎಂದರೆ ಜಿಲ್ಲಾ ಆಸ್ಪತ್ರೆಗಳು, ಇತರ ದೊಡ್ಡ ಆಸ್ಪತ್ರೆಗಳು, ನಗರ ಕುಟುಂಬ ಕಲ್ಯಾಣ ಕೇಂದ್ರ, ಮಹಿಳಾ ಮತ್ತು ಮಕ್ಕಳ ಆಸ್ಪತ್ರೆ, ತಾಲ್ಲೂಕು ಮಟ್ಟದಲ್ಲಿಯ ಸಾರ್ವಜನಿಕ ಆಸ್ಪತ್ರೆಗಳು, ಸಮುದಾಯ ಆರೋಗ್ಯ ಕೇಂದ್ರ, ನಗರ ಪ್ರಾಥಮಿಕ ಆರೋಗ್ಯ ಕೇಂದ್ರ, ಪ್ರಾಥಮಿಕ ಆರೋಗ್ಯ ಕೇಂದ್ರ, ಉಪ ಕೇಂದ್ರ, ಸಂಚಾರಿ ಆರೋಗ್ಯ ಘಟಕ, ಸಂಚಾರಿ ಟ್ರೈಬಲ್ ಘಟಕ, ಹೆರಿಗೆ ಕೇಂದ್ರ ಮತ್ತು ಆಯುಷ್ ಆಸ್ಪತ್ರೆ ಅಥವಾ ಸರ್ಕಾರದಿಂದ ಸ್ಥಾಪಿಸಲ್ಪಟ್ಟಿರುವ ಯಾವುದೇ ಹೆಸರಿನಿಂದ ಕರೆಯಲ್ಪಡುವ ಮತ್ತು ಯಾವುದೇ ವೈದ್ಯಕೀಯ ಪದ್ಧತಿಗೆ ಸಂಬಂಧಿಸಿದ ಯಾವುದೇ ಸಂಸ್ಥೆ, ಕೇಂದ್ರ ಅಥವಾ ಇತರ ಕೇಂದ್ರ ಇವುಗಳನ್ನು ಒಳಗೊಳ್ಳುತ್ತದೆ;

(ಎಫ್) **"ಸರ್ಕಾರಿ ಸಂಸ್ಥೆ"** ಎಂದರೆ ಮತ್ತು ಇದು ಒಂದು ತರಬೇತಿ ಕೇಂದ್ರ, ಒಂದು ಆಡಳಿತ ಕಚೇರಿ ಅಥವಾ ಯಾವುದೇ ವೈದ್ಯಕೀಯ ಪದ್ಧತಿಗೆ ಸಂಬಂಧಿಸಿದ, ರಾಜ್ಯ ಸರ್ಕಾರವು ಸ್ಥಾಪಿಸಿದ, ಮತ್ತು ಯಾವುದೇ ಹೆಸರಿನಿಂದ ಕರೆಯಲ್ಪಡುವ ಯಾವುದೇ ಇತರ ಸಂಸ್ಥೆಗಳು ಇವುಗಳನ್ನು ಒಳಗೊಳ್ಳುತ್ತದೆ;

(ಜಿ) **"ವೈದ್ಯಾಧಿಕಾರಿ"** ಎಂದರೆ, ಅನುಸೂಚಿ – I ರಲ್ಲಿ ನಿರ್ದಿಷ್ಟಪಡಿಸಿದ ಹುದ್ದೆಗಳ ಯಾವುದೇ ಪ್ರವರ್ಗಕ್ಕೆ ನೇಮಕಾತಿ ಪ್ರಾಧಿಕಾರವು ನೇಮಕ ಮಾಡಿದ ಒಬ್ಬ ವೈದ್ಯಾಧಿಕಾರಿ;

(ಎಚ್) "ಇತರ ಸಿಬ್ಬಂದಿ" ಎಂದರೆ, ಅನುಸೂಚಿ – II ರಲ್ಲಿ ನಿರ್ದಿಷ್ಟಪಡಿಸಿದ ಹುದ್ದೆಗಳ ಯಾವುದೇ ಪ್ರವರ್ಗಕ್ಕೆ ನೇಮಕಾತಿ ಪ್ರಾಧಿಕಾರವು ನೇಮಕ ಮಾಡಿದ ಒಬ್ಬ ವ್ಯಕ್ತಿ;

(ಐ) "ಕೌನ್ಸಿಲಿಂಗ್ ಪ್ರಕ್ರಿಯೆ" ಎಂದರೆ, ನೇಮಕಾತಿಗಾಗಿ ಅಥವಾ ವರ್ಗಾವಣೆಗಾಗಿ ಪರಿಗಣಿಸಿರುವ ವ್ಯಕ್ತಿಗೆ ಆತನು ಕೆಲಸ ಮಾಡಿದ ಸ್ಥಳ ಅಥವಾ ವಲಯದಲ್ಲಿ ಆತನು ಸಲ್ಲಿಸಿದ ಸೇವೆಯ ಅವಧಿಯ ಆಧಾರದ ಆದ್ಯತೆಯ ಮೇಲೆ ಮತ್ತು ನಿಯಮಿಸಬಹುದಾದ ಅಂಥ ಇತರ ಅರ್ಹತೆಯ ಮೇಲೆ, ಸ್ಥಳ ಅಥವಾ ಹುದ್ದೆಯನ್ನು ಆಯ್ಕೆ ಮಾಡಲು ಒಬ್ಬ ವ್ಯಕ್ತಿಗೆ ಅವಕಾಶವನ್ನು ನೀಡುವ ಪ್ರಕ್ರಿಯೆ;

(ಜೆ) "ಪ್ರಾಜೆಕ್ಟ್ ಹುದ್ದೆ" ಎಂದರೆ, ವಿದೇಶಿ ಏಜೆನ್ಸಿಯಾಗಲೀ ಅಥವಾ ಭಾರತ ಸರ್ಕಾರವಾಗಲೀ ನೀಡಿದ ನೆರವಿನ ಅಡಿಯಲ್ಲಿ ನಿರ್ದಿಷ್ಟ ಉದ್ದೇಶ ಮತ್ತು ನಿರ್ದಿಷ್ಟ ಅವಧಿಗಾಗಿ ಸೃಜಿಸಿದ ಒಂದು ಹುದ್ದೆ;

(ಕೆ) "ಗ್ರಾಮೀಣ ಪ್ರದೇಶ" ಎಂದರೆ, ನಗರ ಪ್ರದೇಶ ಆಗಿರದ ಒಂದು ಪ್ರದೇಶ;

(ಎಲ್) "ಅನುಸೂಚಿ" ಎಂದರೆ, ಈ ಅಧಿನಿಯಮಕ್ಕೆ ಲಗತ್ತಿಸಲಾದ ಅನುಸೂಚಿ;

(ಎಂ) "ಹಿರಿಯ ವಿಶೇಷಜ್ಞ" ಎಂದರೆ, ಸ್ನಾತಕೋತ್ತರ ಪದವಿ ಅಥವಾ ಸ್ನಾತಕೋತ್ತರ ಡಿಪ್ಲೊಮೊ ವಿದ್ಯಾರ್ಹತೆಯನ್ನು ಹೊಂದಿರುವ ಮತ್ತು ಹಿರಿಯ ವಿಶೇಷಜ್ಞನಾಗಿ ಕಾರ್ಯ ನಿರ್ವಹಿಸುತ್ತಿರುವ ಒಬ್ಬ ವೈದ್ಯಾಧಿಕಾರಿ;

(ಎನ್) "ವಿಶೇಷಜ್ಞ" ಎಂದರೆ, ಸ್ನಾತಕೋತ್ತರ ಪದವಿ ಅಥವಾ ಸ್ನಾತಕೋತ್ತರ ಡಿಪ್ಲೊಮೊ ವಿದ್ಯಾರ್ಹತೆಯನ್ನು ಹೊಂದಿರುವ ಮತ್ತು ವಿಶೇಷಜ್ಞನಾಗಿ ಕಾರ್ಯ ನಿರ್ವಹಿಸುತ್ತಿರುವ ಒಬ್ಬ ವೈದ್ಯಾಧಿಕಾರಿ;

(ಒ) "ವರ್ಗಾವಣೆ" ಎಂದರೆ, ವೈದ್ಯಾಧಿಕಾರಿ ಅಥವಾ ಇತರ ಸಿಬ್ಬಂದಿಯನ್ನು ಕೆಲಸದ ಒಂದು ಸ್ಥಳದಿಂದ ಇನ್ನೊಂದು ಕೆಲಸದ ಸ್ಥಳಕ್ಕೆ ನಿಯೋಜಿಸುವುದು;

(ಪಿ) "ನಗರ ಪ್ರದೇಶ" ಎಂದರೆ, ನಗರಪಾಲಿಕೆ, ನಗರಸಭೆ, ಪುರಸಭೆ, ಪಟ್ಟಣ ಪಂಚಾಯತಿ ಅಥವಾ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಅಡಿಯಲ್ಲಿ ನಿರ್ದಿಷ್ಟಪಡಿಸಿದ ಇತರ ಅಧಿಸೂಚಿತ ಪ್ರದೇಶಗಳ ಮಿತಿಗಳೊಳಗೆ ಇರುವ ಯಾವುದೇ ಪ್ರದೇಶ ಮತ್ತು ಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಬಹುದಾದ ಮೇಲೆ ಅಧಿಸೂಚಿಸಿದ ಪ್ರದೇಶಗಳ ಪರಿಮಿತಿಗಳಿಂದ ಅಂಥ ದೂರದವರೆಗೆ ಇರುವ ಪ್ರದೇಶ;

(ಕ್ಯೂ) "ವಲಯ – ಎ" ಎಂದರೆ, ಜಿಲ್ಲಾ ಕೇಂದ್ರಗಳಲ್ಲಿರುವ ನಗರಸಭೆ ಅಥವಾ ಪುರಸಭೆಯ ಪರಿಮಿತಿಯೊಳಗೆ ಬರುವ ಪ್ರದೇಶ;

(ಆರ್) "ವಲಯ – ಬಿ" ಎಂದರೆ, ಜಿಲ್ಲಾ ಕೇಂದ್ರಗಳಲ್ಲಿರುವ ನಗರಸಭೆಯನ್ನು ಹೊರತುಪಡಿಸಿ ಇತರ ನಗರಸಭೆ, ಪಟ್ಟಣ ಪುರಸಭೆಗಳ ಅಥವಾ ಪಟ್ಟಣ ಪಂಚಾಯತಿಯ ಪರಿಮಿತಿಯೊಳಗೆ ಬರುವ ನಗರ ಪ್ರದೇಶ ಮತ್ತು ನಗರ ಪ್ರದೇಶಗಳೆಂದು ಅಧಿಸೂಚಿಸಿದ ಪ್ರದೇಶಗಳು;

**3. ಕೌನ್ಸಿಲಿಂಗ್ ಮೂಲಕ ಪ್ರಾರಂಭಿಕ ನೇಮಕಾತಿ, ವರ್ಗಾವಣೆ ಅಥವಾ ಬಡ್ತಿ.–** ಈ ಅಧಿನಿಯಮದಡಿಯಲ್ಲಿ ವೈದ್ಯಾಧಿಕಾರಿಗಳು ಅಥವಾ ಇತರ ಸಿಬ್ಬಂದಿಯ ಪ್ರಾರಂಭಿಕ ನೇಮಕಾತಿ, ವರ್ಗಾವಣೆ ಅಥವಾ ಬಡ್ತಿಯನ್ನು ನಿಯಮಿಸಬಹುದಾದಂಥ ವಿಧಾನದಲ್ಲಿ ನಡೆಸುವ ಕೌನ್ಸಿಲಿಂಗ್ ಪ್ರಕ್ರಿಯೆಯ ಮೂಲಕ ಮಾಡತಕ್ಕದ್ದು:

ಪರಂತು, ಕೌನ್ಸಿಲಿಂಗ್‌ನ ಪ್ರಕ್ರಿಯೆಯ ಮೂಲಕ ಮಾಡುವ ವರ್ಗಾವಣೆಗಳಿಗೆ ಸಂಬಂಧಿಸಿದ ಉಪಬಂಧಗಳು, ಪ್ರಾಜೆಕ್ಟ್ ಹುದ್ದೆಗಳೆಂದು ಗುರುತಿಸಲ್ಪಡುವ ಹುದ್ದೆಗಳಿಗೆ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಜಿಲ್ಲಾ ಶಸ್ತ್ರ ಚಿಕಿತ್ಸಕ, ತರಬೇತಿ ಸಂಸ್ಥೆಯ ಪ್ರಾಂಶುಪಾಲರು, ಜಂಟಿ ನಿರ್ದೇಶಕರು, ಉಪ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ದೊಡ್ಡ ಆಸ್ಪತ್ರೆಗಳ ಅಧೀಕ್ಷಕರುಗಳ, ಜಿಲ್ಲಾ ಆಯುಷ್ ಅಧಿಕಾರಿ ಹಾಗೂ ಆಯುಷ್ ಇಲಾಖೆಯ ಉಪ ನಿರ್ದೇಶಕರುಗಳ ಹುದ್ದೆಗಳಿಗೆ ಅನ್ವಯವಾಗತಕ್ಕದ್ದಲ್ಲ.

**4. ಗ್ರಾಮೀಣ ಪ್ರದೇಶಗಳಲ್ಲಿ ವೈದ್ಯಾಧಿಕಾರಿಗಳು ಅಥವಾ ಇತರೆ ಸಿಬ್ಬಂದಿಗಳ ಕಡ್ಡಾಯ ನೇಮಕಾತಿ.–** (1) ನೇಮಕಾತಿ ಪ್ರಾಧಿಕಾರ ಅಥವಾ ಸಕ್ಷಮ ಪ್ರಾಧಿಕಾರವು, ಸರ್ಕಾರಿ ಆಸ್ಪತ್ರೆ ಅಥವಾ ಸರ್ಕಾರಿ ಸಂಸ್ಥೆಗೆ ವೈದ್ಯಾಧಿಕಾರಿ ಅಥವಾ ಇತರ ಸಿಬ್ಬಂದಿಯ ಪ್ರಾರಂಭಿಕ ನೇಮಕಾತಿ ಅಥವಾ ಬಡ್ತಿಯ ಸಂದರ್ಭದಲ್ಲಿ, ಗ್ರಾಮೀಣ ಪ್ರದೇಶಗಳಲ್ಲಿನ ಖಾಲಿ ಸ್ಥಾನಗಳು ಭರ್ತಿ ಮಾಡುವುದನ್ನು ಮೊದಲು ಖಚಿತಪಡಿಸಿಕೊಳ್ಳತಕ್ಕದ್ದು.

(2) ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಸೇವೆಯಲ್ಲಿದ್ದಂಥ ಮತ್ತು ಈ ಅಧಿನಿಯಮವು ಪ್ರಾರಂಭವಾದ ದಿನಾಂಕಕ್ಕೆ ಮೊದಲು ಗ್ರಾಮೀಣ ಪ್ರದೇಶಗಳಲ್ಲಿ ನಿಯಮಿಸಲಾದಷ್ಟು ವರ್ಷಗಳು ಸೇವೆ ಸಲ್ಲಿಸದಿರುವ ವೈದ್ಯಾಧಿಕಾರಿ ಅಥವಾ ಇತರ ಸಿಬ್ಬಂದಿಯನ್ನು ಗ್ರಾಮೀಣ ಪ್ರದೇಶದಲ್ಲಿನ ಹುದ್ದೆಗೆ ವರ್ಗಾವಣೆ ಮಾಡತಕ್ಕದ್ದು:

ಪರಂತು, ಗ್ರಾಮೀಣ ಪ್ರದೇಶಕ್ಕೆ ವೈದ್ಯಾಧಿಕಾರಿ ಅಥವಾ ಇತರ ಸಿಬ್ಬಂದಿಯ ಕಡ್ಡಾಯ ವರ್ಗಾವಣೆಗೆ ಸಂಬಂಧಿಸಿದ ಉಪಬಂಧಗಳನ್ನು ಐವತ್ತು ವರ್ಷಗಳ ವಯಸ್ಸನ್ನು ಮೀರಿದ ವ್ಯಕ್ತಿಗಳಿಗೆ ಅನ್ವಯಿಸತಕ್ಕದ್ದಲ್ಲ.

(3) ಕಡ್ಡಾಯ ಗ್ರಾಮೀಣ ಸೇವೆಯನ್ನು ನಿಯಮಿಸಲಾದಂಥ ಹುದ್ದೆಯ ಸಂಬಂಧದಲ್ಲಿ ಪ್ರಾರಂಭಿಕ ನೇಮಕಾತಿ ಅಥವಾ ಬಡ್ತಿಗೆ ಯಾವುದೇ ಖಾಲಿ ಸ್ಥಾನವು ಲಭ್ಯವಾಗದಿದ್ದಲ್ಲಿ, ಗ್ರಾಮೀಣ ಸೇವೆಗೆ ನಿಯಮಿಸಲಾದಷ್ಟು ವರ್ಷಗಳನ್ನು ಪೂರ್ಣಗೊಳಿಸಿರುವಂಥ ವೈದ್ಯಾಧಿಕಾರಿ ಅಥವಾ ಇತರ ಸಿಬ್ಬಂದಿಯನ್ನು 'ಬಿ' ವಲಯದಲ್ಲಿನ ಮತ್ತೊಂದು ಸ್ಥಳಕ್ಕೆ ವರ್ಗಾವಣೆ ಮಾಡುವ ಮೂಲಕ ಹಾಗೂ ಬಿ ವಲಯದಲ್ಲಿ ಯಾವುದೇ ಖಾಲಿ ಸ್ಥಾನವು ಲಭ್ಯವಿಲ್ಲದಿದ್ದಲ್ಲಿ, ಬಿ ವಲಯದಲ್ಲಿ ದೀರ್ಘಕಾಲ ಸೇವೆ ಸಲ್ಲಿಸಿದಂಥ ವ್ಯಕ್ತಿಯನ್ನು ನಗರ ಪ್ರದೇಶದ ಎ ವಲಯಕ್ಕೆ ವರ್ಗಾವಣೆ ಮಾಡುವ ಮೂಲಕ ಖಾಲಿ ಸ್ಥಾನವನ್ನು ಸೃಜಿಸಬಹುದು.

**5. ಸೂಕ್ತ ಹುದ್ದೆಗೆ ವಿಶೇಷಜ್ಞರು ಅಥವಾ ಹಿರಿಯ ವಿಶೇಷಜ್ಞರ ಕಡ್ಡಾಯ ನೇಮಕಾತಿ ಅಥವಾ ವರ್ಗಾವಣೆ ಅಥವಾ ಬಡ್ತಿ.–** (1) ಸ್ನಾತಕೋತ್ತರ ಪದವಿ ಅಥವಾ ಡಿಪ್ಲೋಮಾ ಹೊಂದಿರುವ ವಿಶೇಷಜ್ಞ ಅಥವಾ ಹಿರಿಯ ವಿಶೇಷಜ್ಞರನ್ನು, ಸ್ನಾತಕೋತ್ತರ ಪದವಿ ಅಥವಾ ಸ್ನಾತಕೋತ್ತರ ಡಿಪ್ಲೋಮಾ

ಹೊಂದಿರುವಂಥವನ ವಿಷಯಕ್ಕೆ ಅಥವಾ ತಜ್ಞತೆಗೆ ಸಂಬಂಧಿಸಿದ ಅಥವಾ ಅನುರೂಪವಾದ ವಿಶೇಷಜ್ಞರ ಹುದ್ದೆಯೆಂದು ಗುರುತಿಸದಿರುವಂಥ ಹುದ್ದೆಯಲ್ಲಿನ ಕಾರ್ಯಕ್ಕೆ ನಿಯೋಜಿಸತಕ್ಕದ್ದಲ್ಲ ಅಥವಾ ವರ್ಗಾವಣೆ ಮಾಡತಕ್ಕದ್ದಲ್ಲ.

(2) ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಂದು ವಿಶೇಷಜ್ಞರು ಅಥವಾ ಹಿರಿಯ ವಿಶೇಷಜ್ಞರು ಹೊಂದಿರುವಂಥ ಸ್ನಾತಕೋತ್ತರ ಪದವಿ ಅಥವಾ ಸ್ನಾತಕೋತ್ತರ ಡಿಪ್ಲೋಮಾದ ತಜ್ಞತೆಗೆ, ಗುರುತಿಸದಿರುವಂಥ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವಂಥ ವಿಶೇಷಜ್ಞರು ಅಥವಾ ಹಿರಿಯ ವಿಶೇಷಜ್ಞರನ್ನು ಅವರುಗಳು ಹೊಂದಿರುವ ವಿಶೇಷ ವಿದ್ಯಾರ್ಹತೆಗೆ ಸಂಬಂಧಿಸಿದಂತೆ ಗುರುತಿಸಲಾದ ಹುದ್ದೆಗೆ ವರ್ಗಾವಣೆ ಮಾಡತಕ್ಕದ್ದು:

ಪರಂತು, ಈ ಪ್ರಕರಣದ ಉಪಬಂಧವನ್ನು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಜಿಲ್ಲಾ ಶಸ್ತ್ರ ಚಿಕಿತ್ಸಕ, ತರಬೇತಿ ಸಂಸ್ಥೆಗಳ ಪ್ರಾಂಶುಪಾಲರು, ಜಂಟಿ ನಿರ್ದೇಶಕರು, ಉಪ ನಿರ್ದೇಶಕರು, ಜಿಲ್ಲಾ ಮಟ್ಟದ ಕಾರ್ಯಕ್ರಮ ಅಧಿಕಾರಿ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ದೊಡ್ಡ ಆಸ್ಪತ್ರೆಗಳ ಅಧೀಕ್ಷಕರುಗಳ ಹುದ್ದೆಗಳಿಗೆ ಅನ್ವಯಿಸತಕ್ಕದ್ದಲ್ಲ.

**6. ಸಾರ್ವಜನಿಕ ಹಿತದೃಷ್ಟಿಯಿಂದ ವೈದ್ಯಾಧಿಕಾರಿ ಅಥವಾ ಇತರ ಸಿಬ್ಬಂದಿಯ ವರ್ಗಾವಣೆ.–** (1) ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಂದು ಸೇವೆಯಲ್ಲಿರುವ ಮತ್ತು ಒಂದು ಪ್ರದೇಶ ಅಥವಾ ವಲಯದಲ್ಲಿಯ ಸರ್ಕಾರಿ ಆಸ್ಪತ್ರೆ ಅಥವಾ ಸರ್ಕಾರಿ ಸಂಸ್ಥೆಯಲ್ಲಿ, ನಿಯಮಿಸಲಾದ ನಿರಂತರ ಸೇವಾ ವರ್ಷಗಳನ್ನು ಪೂರೈಸಿರುವ ವೈದ್ಯಾಧಿಕಾರಿ ಅಥವಾ ಇತರ ಸಿಬ್ಬಂದಿಯನ್ನು ಆ ಪ್ರದೇಶ ಅಥವಾ ಹುದ್ದೆಯಲ್ಲಿ ದೀರ್ಘಾವಧಿ ಸೇವೆ ಸಲ್ಲಿಸಿರುವಂಥ ಮತ್ತು ನಿಯಮಿಸಬಹುದಾದ ಅಂಥ ಇತರ ಮಾನದಂಡಗಳ ಮೇಲೆ ವ್ಯಕ್ತಿಗಳಿಗೆ ಆದ್ಯತೆಯನ್ನು ನೀಡಿ ಕೌನ್ಸಿಲಿಂಗ್ ಪ್ರಕ್ರಿಯೆಯ ಮೂಲಕ, ಈ ಮುಂದಿನ ಕ್ರಮದಲ್ಲಿ, ಎಂದರೆ,–

(1) ಗ್ರಾಮೀಣ ಪ್ರದೇಶ;

(2) ನಗರ ಪ್ರದೇಶ ಮತ್ತು ಅಲ್ಲಿಯ ವಲಯ –ಬಿ;

(3) ನಗರ ಪ್ರದೇಶದಲ್ಲಿಯ ವಲಯ –ಎ,

– ಇವುಗಳಲ್ಲಿಯ, ಮತ್ತೊಂದು ಸರ್ಕಾರಿ ಆಸ್ಪತ್ರೆ ಅಥವಾ ಅದೇ ಪ್ರದೇಶ ಅಥವಾ ವಲಯ ಅಥವಾ ಯಾವುದೇ ಇತರ ಪ್ರದೇಶ ಅಥವಾ ವಲಯ ಸರ್ಕಾರಿ ಸಂಸ್ಥೆಗೆ ವರ್ಗಾವಣೆ ಮಾಡಬಹುದು:

ಪರಂತು, ವರ್ಷಾವಧಿಯಲ್ಲಿ ಅಂಥ ವರ್ಗಾವಣೆಯ ಒಟ್ಟು ಸಂಖ್ಯೆಯು ಅದೇ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಂಖ್ಯಾ ಬಲದ ಶೇಕಡಾ ಐದರಷ್ಟನ್ನು ಮೀರತಕ್ಕದ್ದಲ್ಲ.

(2) ಅಮಾನತ್ತಿನಿಂದ ಮರುನೇಮಕಾತಿ ಮಾಡುವಾಗ ವೈದ್ಯಾಧಿಕಾರಿ ಅಥವಾ ಇತರ ಸಿಬ್ಬಂದಿಯನ್ನು, ಅವರು ಅಮಾನತ್ತಿಗಿಂತ ಮೊದಲು ಕಾರ್ಯ ನಿರ್ವಹಿಸುತ್ತಿದ್ದ ಪ್ರದೇಶ ಅಥವಾ ವಲಯಕ್ಕಿಂತ ಉನ್ನತವಾದ ಪ್ರದೇಶ ಅಥವಾ ವಲಯಕ್ಕೆ ನಿಯೋಜಿಸತಕ್ಕದ್ದಲ್ಲ.

**7. ದಂಡಗಳು.–** ಈ ಅಧಿನಿಯಮ ಅಥವಾ ಅದರ ಅಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳನ್ನು ಉಲ್ಲಂಘಿಸಿ ಯಾವುದೇ ಸಕ್ಷಮ ಪ್ರಾಧಿಕಾರ ಅಥವಾ ಯಾವೊಬ್ಬ ಸರ್ಕಾರಿ ನೌಕರನು ನಿಯೋಜನೆ ಅಥವಾ ನೇಮಕಾತಿ ಅಥವಾ ವರ್ಗಾವಣೆಯ ಆದೇಶವನ್ನು ಮಾಡಿದ್ದರೆ, ಸಂದರ್ಭಾನುಸಾರ ಅಂಥ ಸಕ್ಷಮ ಪ್ರಾಧಿಕಾರ ಅಥವಾ ಸರ್ಕಾರಿ ನೌಕರನು ಸಿವಿಲ್ ಸೇವಕರಿಗೆ ಅನ್ವಯಿಸುವಂಥ ಶಿಸ್ತು ನಿಯಮಾವಳಿ ಅಡಿಯಲ್ಲಿ ಶಿಸ್ತಿನ ಕ್ರಮಕ್ಕೆ ಗುರಿಯಾಗತಕ್ಕದ್ದು.

**8. ಇತರ ಕಾನೂನುಗಳ ಮೇಲೆ ಅಧಿನಿಯಮದ ಅಧ್ಯಾರೋಹಿ ಪರಿಣಾಮ.–** ಈ ಅಧಿನಿಯಮದ ಉಪಬಂಧಗಳು, ತತ್ಕಾಲದಲ್ಲಿ ಜಾರಿಯಲ್ಲಿರುವ ಇತರೆ ಯಾವುದೇ ಕಾನೂನಿನಲ್ಲಿ ಅವುಗಳಿಗೆ ಅಸಂಗತವಾಗಿ ಏನೇ ಇದ್ದರೂ ಪರಿಣಾಮಕಾರಿಯಾಗಿರತಕ್ಕದ್ದು.

**9. ತೊಂದರೆಗಳನ್ನು ನಿವಾರಿಸಲು ಅಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಯಾವುದೇ ತೊಂದರೆ ಉದ್ಭವಿಸಿದಲ್ಲಿ, ಸರ್ಕಾರವು ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ತೊಂದರೆಗಳನ್ನು ನಿವಾರಿಸಲು ತನಗೆ ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವ ಮತ್ತು ಈ ಅಧಿನಿಯಮದ ಉದ್ದೇಶಗಳಿಗೆ ಅಸಂಗತವಾಗಿರದಂಥ ಉಪಬಂಧಗಳನ್ನು ರಚಿಸಬಹುದು:

ಪರಂತು, ಅಂಥ ಯಾವ ಆದೇಶವನ್ನೂ, ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಮೂರು ವರ್ಷಗಳ ಅವಧಿಯು ಪೂರ್ಣಗೊಂಡ ತರುವಾಯ ಮಾಡತಕ್ಕದ್ದಲ್ಲ.

**10. ಅನುಸೂಚಿಯನ್ನು ತಿದ್ದುಪಡಿ ಮಾಡಲು ಅಧಿಕಾರ.–** ಸರ್ಕಾರವು, ಅಧಿಸೂಚನೆಯ ಮೂಲಕ, ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ನಮೂದನ್ನು ಸೇರಿಸಬಹುದು, ಮಾರ್ಪಡಿಸಬಹುದು ಅಥವಾ ತೆಗೆದುಹಾಕಬಹುದು.

**11. ಸದ್ಭಾವನೆಯಲ್ಲಿ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮದ ಅಡಿಯಲ್ಲಿ ಸದ್ಭಾವನೆಯಿಂದ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಲಾದ ಯಾವುದೇ ಕ್ರಮದ ಬಗ್ಗೆ ಸರ್ಕಾರದ ಯಾವೊಬ್ಬ ಅಧಿಕಾರಿಯ ವಿರುದ್ಧ ಯಾವುದೇ ದಾವೆ, ಅಭಿಯೋಜನೆ ಅಥವಾ ಇತರ ಕಾನೂನು ವ್ಯವಹರಣೆಯನ್ನು ಕೈಗೊಳ್ಳಲು ಅವಕಾಶವಿರತಕ್ಕದ್ದಲ್ಲ.

**12. ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ, ಅಧಿಸೂಚನೆಯ ಮೂಲಕ ಮತ್ತು ಪೂರ್ವಪ್ರಕಟಣೆ ನೀಡಿದ ತರುವಾಯ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಯಾವುದೇ ನಿಯಮವನ್ನು ಪೂರ್ವಾನ್ವಯವಾಗಿ ರಚಿಸಬಹುದು ಮತ್ತು ಅಂಥ ನಿಯಮವನ್ನು ರಚಿಸಿದ ತರುವಾಯ ನಿಯಮವನ್ನು ರಚಿಸಿದ ಕಾರಣಗಳನ್ನು ನಿರ್ದಿಷ್ಟವಾಗಿ ತಿಳಿಸುವ ಹೇಳಿಕೆಯೊಂದನ್ನು ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು ಮತ್ತು (3)ನೇ ಉಪ ಪ್ರಕರಣದ ಅಡಿಯಲ್ಲಿ ಮಾಡಿದ ಯಾವುದೇ ಮಾರ್ಪಾಟಿಗೊಳಪಟ್ಟು, ಈ ಅಧಿನಿಯಮದ ಅಡಿಯಲ್ಲಿ ಮಾಡಿದ ಪ್ರತಿಯೊಂದು ನಿಯಮವು, ಈ ಅಧಿನಿಯಮದ ಅಡಿಯಲ್ಲಿ ಅದು ಅಧಿನಿಯಮಿತವಾಗಿದ್ದರೆ ಹೇಗೋ ಹಾಗೆ ಪರಿಣಾಮಕಾರಿಯಾಗಿರತಕ್ಕದ್ದು.

(3) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು ಅಥವಾ ಹೊರಡಿಸಿದ ಅಧಿಸೂಚನೆಯನ್ನು, ಅದನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳವರೆಗೆ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯವಾಗುವ ಮೊದಲು, ವಿಧಾನಮಂಡಲದ ಉಭಯ ಸದನಗಳು ನಿಯಮದಲ್ಲಿ ಅಥವಾ ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಟುಮಾಡಬೇಕೆಂದು ಒಪ್ಪಿದರೆ ಅಥವಾ ನಿಯಮವನ್ನು ಅಥವಾ ಅಧಿಸೂಚನೆಯನ್ನು ರಚಿಸಬಾರದೆಂದು ತೀರ್ಮಾನಿಸಿದರೆ, ಆ ತರುವಾಯ ಅಂಥ ನಿಯಮವು ಅಥವಾ ಅಧಿಸೂಚನೆಯು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಥವಾ ಅಧಿಸೂಚನೆಯ ಅಡಿಯಲ್ಲಿ ಈ ಹಿಂದೆ ಮಾಡಿದ ಯಾವುದೇ ಕಾರ್ಯಕ್ಕೂ ಬಾಧಕವಾಗತಕ್ಕದ್ದಲ್ಲ.

**13. ತಾತ್ಕಾಲಿಕ ಉಪಬಂಧಗಳು.–** ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಜಾರಿಯಲ್ಲಿರುವ ಹಾಗೂ ಯಾವ ವಿಷಯಗಳ ಮುಂದುವರಿಕೆಗಾಗಿ ಈ ಅಧಿನಿಯಮವನ್ನು ಜಾರಿಗೆ ತರಲಾಗಿದೆಯೋ ಅಥವಾ ಉಪಬಂಧ ಕಲ್ಪಿಸಲಾಗಿದೆಯೋ ಅದಕ್ಕೆ ಸಂಬಂಧಪಟ್ಟ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 ರ (1990ರ ಕರ್ನಾಟಕ ಅಧಿನಿಯಮ 14) ಅಡಿಯಲ್ಲಿ ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು ರಚಿಸಿದ ಅಥವಾ ಹೊರಡಿಸಿದ ಯಾವುದೇ ನಿಯಮ, ಅಧಿಸೂಚನೆ, ಆದೇಶ ಅಥವಾ ನೇಮಕಗಳು ಅವು ಈ ಅಧಿನಿಯಮದ ಅಡಿಯಲ್ಲಿ ಮಾಡಿದ ಯಾವುದೇ ಕಾರ್ಯದಿಂದ ಅಥವಾ ತೆಗೆದುಕೊಂಡ ಯಾವುದೇ ಕ್ರಮದಿಂದ ಅಥವಾ ಯಾವುದೇ ನಿಯಮ, ಅಧಿಸೂಚನೆ, ಆದೇಶ ಅಥವಾ ನೇಮಕದಿಂದ ರದ್ದಾದ ಹೊರತು ಮತ್ತು ರದ್ದಾಗುವವರೆಗೆ, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಿರುವಷ್ಟರ ಮಟ್ಟಿಗೆ, ಅವುಗಳನ್ನು ಈ ಅಧಿನಿಯಮದ ಸಂವಾದಿ ಉಪಬಂಧಗಳ ಅಡಿಯಲ್ಲಿ ರಚಿಸಿದ್ದರೆ ಅಥವಾ ಹೊರಡಿಸಿದ್ದರೆ ಅಥವಾ ನೇಮಿಸಿದ್ದರೆ, ಹೇಗೋ ಹಾಗೆ ಜಾರಿಯಲ್ಲಿ ಮುಂದುವರಿಯತಕ್ಕದ್ದು ಮತ್ತು ಪರಿಣಾಮಕಾರಿಯಾಗಿರತಕ್ಕದ್ದು.

**ಅನುಸೂಚಿ – I**

**(2(ಜಿ), (ಎಲ್) ಪ್ರಕರಣ ಮತ್ತು 10ನೇ ಪ್ರಕರಣ ನೋಡಿ)**
**"ವೈದ್ಯಾಧಿಕಾರಿ ಹುದ್ದೆ"ಯ ಅರ್ಥ ವ್ಯಾಪ್ತಿಯಡಿಯಲ್ಲಿ ಬರುವ ಹುದ್ದೆಗಳು**

| ಕ್ರಮ ಸಂಖ್ಯೆ | ಹುದ್ದೆಗಳ ವರ್ಗ |
|---|---|
| 1. | ಹಿರಿಯ ವಿಶೇಷಜ್ಞ /ವಿಶೇಷಜ್ಞ /ಉಪಮುಖ್ಯ ವೈದ್ಯಾಧಿಕಾರಿ/ಹಿರಿಯ ವೈದ್ಯಾಧಿಕಾರಿ. |
| 2. | ಸಾಮಾನ್ಯ ಕರ್ತವ್ಯನಿರತ ವೈದ್ಯಾಧಿಕಾರಿ/ವೈದ್ಯ – ಶ್ರೇಣಿ I (ಆಯುರ್ವೇದ/ಯುನಾನಿ/ಹೋಮಿಯೋಪತಿ/ ಪ್ರಕೃತಿ ಚಿಕಿತ್ಸೆ/ಸಿದ್ಧ ಮತ್ತು ಯೋಗ)/ವೈದ್ಯ – ಶ್ರೇಣಿ II (ಆಯುರ್ವೇದ/ಯುನಾನಿ/ಹೋಮಿಯೋಪತಿ/ ಪ್ರಕೃತಿ ಚಿಕಿತ್ಸೆ/ಸಿದ್ಧ ಮತ್ತು ಯೋಗ) |
| 3. | ಮುಖ್ಯ ದಂತ ಆರೋಗ್ಯ ಅಧಿಕಾರಿ/ಹಿರಿಯ ದಂತ ಆರೋಗ್ಯ ಅಧಿಕಾರಿ/ದಂತ ಆರೋಗ್ಯ ಅಧಿಕಾರಿ. |

**ಅನುಸೂಚಿ – II**

**(2(ಎಚ್)(ಎಲ್) ಪ್ರಕರಣ ಮತ್ತು 10ನೇ ಪ್ರಕರಣ ನೋಡಿ)**
**"ಇತರ ಸಿಬ್ಬಂದಿ"ಯ ಅರ್ಥ ವ್ಯಾಪ್ತಿಯಡಿಯಲ್ಲಿ ಬರುವ ಹುದ್ದೆಗಳು**

| ಕ್ರಮ ಸಂಖ್ಯೆ | ಹುದ್ದೆಗಳ ವರ್ಗ |
|---|---|
| 1. | ಅನುಸೂಚಿ – I ರಲ್ಲಿ ಸೇರಿರುವುದನ್ನು ಹೊರತುಪಡಿಸಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮತ್ತು ಆಯುಷ್ ವಿಭಾಗದ ಗ್ರೂಪ್ "ಬಿ" ಸಿಬ್ಬಂದಿ. |
| 2. | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮತ್ತು ಆಯುಷ್ ವಿಭಾಗದ ಗ್ರೂಪ್ "ಸಿ" ಸಿಬ್ಬಂದಿ. |
| 3. | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮತ್ತು ಆಯುಷ್ ವಿಭಾಗದ ಗ್ರೂಪ್ "ಡಿ" ಸಿಬ್ಬಂದಿ. |

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಈ ಮುಂದಿನ ಉದ್ದೇಶಗಳನ್ನು ಎಂದರೆ,–

(ಎ) ಕೌನ್ಸಿಲಿಂಗ್‌ನ ಪ್ರಕ್ರಿಯೆಯ ಮೂಲಕ ವರ್ಗಾವಣೆಯಲ್ಲಿ ಪಾರದರ್ಶಕತೆ ತರುವುದು;

(ಬಿ) ವೈದ್ಯಾಧಿಕಾರಿಗಳು ಹಾಗೂ ಇತರೆ ಸಿಬ್ಬಂದಿಯ ಸಂಬಂಧದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಕನಿಷ್ಠ ಸೇವಾ ವರ್ಷಗಳನ್ನು ಖಚಿತಪಡಿಸುವುದು;

(ಸಿ) ವಿಶೇಷಜ್ಞರ ಅಥವಾ ಹಿರಿಯ ವಿಶೇಷಜ್ಞರ ಕೆಲಸವನ್ನು ಅವರ ವಿದ್ಯಾರ್ಹತೆಗೆ ಅನುಗುಣವಾಗಿರುವುದನ್ನು ನಿಶ್ಚಿತಗೊಳಿಸುವುದು,

– ಇವುಗಳನ್ನು ಸಾಧಿಸುವ ಮೂಲಕ ಗ್ರಾಮೀಣ ಪ್ರದೇಶಗಳಲ್ಲಿನ ಸರ್ಕಾರಿ ಆಸ್ಪತ್ರೆಗಳಲ್ಲಿ ವೈದ್ಯಾಧಿಕಾರಿಗಳು ಮತ್ತು ಇತರೆ ಸಿಬ್ಬಂದಿಯ ಲಭ್ಯತೆಯನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ ಹಾಗೆಯೇ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಹಾಗೂ ಆಯುಷ್ ಇಲಾಖೆಯಲ್ಲಿಯ ವೈದ್ಯಾಧಿಕಾರಿಗಳು ಹಾಗೂ ಇತರ ಸಿಬ್ಬಂದಿಯ ವರ್ಗಾವಣೆಯನ್ನು ನಿಯಂತ್ರಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತು ಜ್ಞಾಪನ ಪತ್ರ**

ಖಂಡ 3: ವೈದ್ಯಾಧಿಕಾರಿ ಅಥವಾ ಇತರ ಸಿಬ್ಬಂದಿಯ ಪ್ರಾರಂಭಿಕ ನೇಮಕಾತಿ, ವರ್ಗಾವಣೆ ಅಥವಾ ಬಡ್ತಿಯನ್ನು ಮಾಡುವಾಗ ಕೌನ್ಸಿಲಿಂಗ್ ಪ್ರಕ್ರಿಯೆಯನ್ನು ನಡೆಸುವ ವಿಧಾನವನ್ನು ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಖಂಡ 6: ಸಾರ್ವಜನಿಕ ಹಿತದೃಷ್ಟಿಯಿಂದ ವೈದ್ಯಾಧಿಕಾರಿ ಅಥವಾ ಇತರ ಸಿಬ್ಬಂದಿಯ ವರ್ಗಾವಣೆಗಾಗಿ ಸೇವಾವಧಿಯ ಜೊತೆಗೆ ಆದ್ಯತೆಯನ್ನು ನೀಡುವುದಕ್ಕಾಗಿ ಪರಿಗಣಿಸಬೇಕಾದ ಇತರ ಮಾನದಂಡಗಳ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಖಂಡ 12: (1)ನೇ ಉಪ–ಖಂಡವು, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ, ಪೂರ್ವ ಪ್ರಕಟಣೆ ನೀಡಿದ ತರುವಾಯ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಬಿ. ಶ್ರೀರಾಮುಲು**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು
**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

# ವಿಶೇಷ ಪತ್ರಿಕೆ



| ಭಾಗ – ***IV-A*** | **ಬೆಂಗಳೂರು, ಗುರುವಾರ, ಜನವರಿ ೧೩, ೨೦೧೧ (ಪುಷ್ಯ ೨೩, ಶಕ ವರ್ಷ ೧೯೩೨)** | **ನಂ. ೪೬** |
|---|---|---|



**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕವಿಪ:ಶಾರಶಾ:ವಿಪವಿ 02:2011, ಬೆಂಗಳೂರು, ದಿನಾಂಕ: 13ನೇ ಜನವರಿ, 2011**

ಈ ಮುಂದಿನ ವಿಧೇಯಕವನ್ನು ವಿಧಾನ ಪರಿಷತ್ತಿನಲ್ಲಿ ದಿನಾಂಕ: 13ನೇ ಜನವರಿ 2011 ರಂದು ಮಂಡಿಸಲಾಯಿತು.

**"ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) (ತಿದ್ದುಪಡಿ) ವಿಧೇಯಕ, 2011".**

**ಕರ್ನಾಟಕ ವಿಧಾನ ಪರಿಷತ್ತು**

**ನೂರ ಹದಿನಾಲ್ಕನೇ ಅಧಿವೇಶನ**

## ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) (ತಿದ್ದುಪಡಿ) ವಿಧೇಯಕ, 2011

**(2011ರ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ 02)**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ನ್ನು (1966ರ ಕರ್ನಾಟಕ ಅಧಿನಿಯಮ 27) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು **ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) (ತಿದ್ದುಪಡಿ) ಅಧಿನಿಯಮ, 2011** ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 65ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27), 65ನೇ ಪ್ರಕರಣದಲ್ಲಿ,

(1) (4)ನೇ ಉಪ-ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ವಿಸ್ತರಣೆ /ಆಧುನೀಕರಣ / ವೈವಿಧ್ಯಗೊಳಿಸುವುದು ಇವುಗಳನ್ನು ಕೈಗೊಳ್ಳುವಂಥ ಅಸ್ತಿತ್ವದಲ್ಲಿರುವ ಸಂಸ್ಕರಣ ಕೈಗಾರಿಕೆಗಳಿಗೂ ಸಹ, ಈ ಮುಂದಿನ ಷರತ್ತುಗಳಿಗೆ ಒಳಪಟ್ಟು, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) (ತಿದ್ದುಪಡಿ) ಅಧಿನಿಯಮ, 2011 ಪ್ರಾರಂಭದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಮಾರುಕಟ್ಟೆ ಶುಲ್ಕದ ಸಂದಾಯದಿಂದ ವಿನಾಯತಿಯನ್ನು ನೀಡತಕ್ಕದ್ದು, ಎಂದರೆ:–

(ಎ) ಸ್ಥಿರಾಸ್ತಿಗಳ ಮೇಲೆ ಈ ಮೊದಲಿನ ಹೂಡಿಕೆಯ ಶೇಕಡ ಐವತ್ತರಷ್ಟು ಕನಿಷ್ಠ ಹೂಡಿಕೆಯನ್ನು ಮಾಡಬೇಕಾಗುತ್ತದೆ;

(ಬಿ) ಹಿಂದಿನ ಮೂರು ವರ್ಷಗಳಲ್ಲಿ ಮಾಡಿದ ಉತ್ಪನ್ನಗಳ ಸರಾಸರಿಗೆ ತುಲನೆ ಮಾಡಿದಾಗ ಉತ್ಪನ್ನದ ಹೆಚ್ಚುವರಿಯು ವಿಸ್ತರಣಾ ಕಾರ್ಯಕ್ರಮದ ಅಡಿಯಲ್ಲಿ ವಿನಾಯತಿಗೆ ಅರ್ಹವಾಗುತ್ತದೆ;

(ಸಿ) ಅಸ್ತಿತ್ವದಲ್ಲಿರುವುದನ್ನು ಹೊರತುಪಡಿಸಿ ಹೊಸ ಉತ್ಪನ್ನದ ಉತ್ಪಾದನೆಗಾಗಿ ಬಳಸಿದ ಕಚ್ಚಾ ವಸ್ತುವನ್ನು ವೈವಿದ್ಯತಾ ಕಾರ್ಯಕ್ರಮಕ್ಕಾಗಿ ಪರಿಗಣಿಸಲಾಗುತ್ತದೆ;

(ಡಿ) ಆಧುನೀಕರಣಗೊಳಿಸುವ ಕಾರ್ಯಕ್ರಮದಡಿಯಲ್ಲಿ ಆಧುನಿಕ ಯಂತ್ರೋಪಕರಣಗಳೊಂದಿಗೆ ಎಲ್ಲಾ ಹಳೆಯ ಯಂತ್ರೋಪಕರಣಗಳನ್ನು ಬದಲಾಯಿಸಿದಂಥ ಈಗಿರುವ ಘಟಕಗಳನ್ನು ಕೇವಲ ಸಂಸ್ಕರಣಾ ಸಾಮರ್ಥ್ಯಕ್ಕಾಗಿ ಖರೀದಿಸಿದ ಒಟ್ಟು ಕಚ್ಚಾ ಸಾಮಗ್ರಿಯ ಮೇಲೆ ಮಾತ್ರ ಮಾರುಕಟ್ಟೆ ಶುಲ್ಕದ ಸಂದಾಯದಿಂದ ವಿನಾಯಿತಿಗೊಳಿಸತಕ್ಕದ್ದು;

(ಇ) ನಿರ್ದೇಶಕರು, ಕೈಗಾರಿಕೆಗಳು ಹಾಗೂ ವಾಣಿಜ್ಯ ಇಲಾಖೆ, ಕರ್ನಾಟಕ ಸರ್ಕಾರ ಅಥವಾ ಇವರ ನಾಮ ನಿರ್ದೇಶಿತರು, ಈತನು ಮೇಲಿನ ಷರತ್ತುಗಳನ್ನು ಪೂರೈಸಿರುತ್ತಾನೆ ಹಾಗೂ ಈತನು ಶುಲ್ಕದ ವಿನಾಯಿತಿಗೆ ಅರ್ಹನಾಗಿರುತ್ತಾನೆ ಎಂದು ಪ್ರಮಾಣೀಕರಿಸಿ ನೀಡಿರುವ ಪ್ರಮಾಣಪತ್ರವನ್ನು ಹಾಜರುಪಡಿಸತಕ್ಕದ್ದು``

(2) (4)ನೇ ಉಪ-ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

(5) ಈ ಮುಂದಿನ ಷರತ್ತುಗಳಿಗೆ ಒಳಪಟ್ಟು, ಅಧಿನಿಯಮಕ್ಕೆ ಲಗತ್ತಿಸಲಾದ, ಅನುಸೂಚಿಯ II, III, IV, VI, VII, IX ಮತ್ತು X ನೇ ಕ್ರಮಸಂಖ್ಯೆಗಳಲ್ಲಿ ನಿರ್ದಿಷ್ಟಪಡಿಸಲಾದಂತೆ, ನೇರವಾಗಿ ರೈತರಿಂದ ಕೃಷಿ ಉತ್ಪನ್ನಗಳ ಖರೀದಿಯ ಮೇಲೆ ಸರ್ಕಾರಿ ಆದೇಶ ಸಂಖ್ಯೆ: ಸಿ1/223/ಎಸ್‌ಪಿಐ/2008, ದಿ:28-02-2009 ರಲ್ಲಿ ಪ್ರಕಟಿಸಿದ ಕರ್ನಾಟಕ ಹೊಸ ಕೈಗಾರಿಕಾ ಕಾರ್ಯನೀತಿ 2009-2014ರ ಅಡಿಯಲ್ಲಿ ಗುರುತಿಸಲಾದಂತೆ ವಲಯ 1, 2 ಹಾಗೂ 3ರಲ್ಲಿ ವಿಸ್ತರಣೆ ಅಥವಾ ಆಧುನೀಕರಣ ಅಥವಾ ವೈವಿದ್ಯತೆಗಳನ್ನು ಕೈಗೊಂಡಂಥ ಹೊಸ ಕೃಷಿ ಉತ್ಪನ್ನಗಳ ಸಂಸ್ಕರಣಾ ಕೈಗಾರಿಕೆಗಳು ಹಾಗೂ ಈಗಿರುವ ಸಂಸ್ಕರಣಾ ಕೈಗಾರಿಕೆಗಳ ಸಂದರ್ಭದಲ್ಲಿ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) (ತಿದ್ದುಪಡಿ) ಅಧಿನಿಯಮ, 2011ರ ಪ್ರಾರಂಭದ ದಿನಾಂಕದಿಂದ ಅನುಕ್ರಮವಾಗಿ ಐದು ವರ್ಷಗಳು, ನಾಲ್ಕು ವರ್ಷಗಳು ಮತ್ತು ಮೂರು ವರ್ಷಗಳ ಅವಧಿಗಾಗಿ ಯಾವುದೇ ಮಾರುಕಟ್ಟೆ ಶುಲ್ಕಗಳನ್ನು ಸಂದಾಯ ಮಾಡತಕ್ಕದ್ದಲ್ಲ, ಎಂದರೆ:-

(i) ವಿಸ್ತರಣೆ ಅಥವಾ ಆಧುನೀಕರಣ ಅಥವಾ ವೈವಿಧ್ಯಗೊಳಿಸುವ ಯೋಜನೆಗಳಡಿಯಲ್ಲಿ ಸ್ಥಿರಾಸ್ತಿಗಳ ಮೇಲೆ ಈ ಮೊದಲಿನ ಹೂಡಿಕೆಯ ಶೇಕಡ ಐವತ್ತರಷ್ಟು ಕನಿಷ್ಠ ಹೂಡಿಕೆಯನ್ನು ಮಾಡಬೇಕಾಗುತ್ತದೆ.

(ii) ಹಿಂದಿನ ಮೂರು ವರ್ಷಗಳಲ್ಲಿ ಮಾಡಿದ ಉತ್ಪನ್ನಗಳ ಸರಾಸರಿಗೆ ತುಲನೆ ಮಾಡಿದಾಗ ಉತ್ಪನ್ನದ ಹೆಚ್ಚುವರಿಯು ವಿಸ್ತರಣಾ ಕಾರ್ಯಕ್ರಮದ ಅಡಿಯಲ್ಲಿ ವಿನಾಯಿತಿಗೆ ಅರ್ಹವಾಗುತ್ತದೆ.

(iii) ಅಸ್ತಿತ್ವದಲ್ಲಿರುವುದನ್ನು ಹೊರತುಪಡಿಸಿ ಹೊಸ ಉತ್ಪನ್ನದ ಉತ್ಪಾದನೆಗಾಗಿ ಬಳಸಿದ ಕಚ್ಚಾ ವಸ್ತುವನ್ನು ವೈವಿಧ್ಯತಾ ಕಾರ್ಯಕ್ರಮಕ್ಕಾಗಿ ಪರಿಗಣಿಸತಕ್ಕದ್ದು.

(iv) ಆಧುನೀಕರಣಗೊಳಿಸುವ ಕಾರ್ಯಕ್ರಮದಡಿಯಲ್ಲಿ ಎಲ್ಲಾ ಹಳೆಯ ಯಂತ್ರೋಪಕರಣಗಳನ್ನು ಆಧುನಿಕ ಯಂತ್ರೋಪಕರಣಗಳಿಗೆ ಬದಲಾಯಿಸಿದಂಥ ಈಗಿರುವ ಘಟಕಗಳನ್ನು ಕೇವಲ ಸಂಸ್ಕರಣಾ ಸಾಮರ್ಥ್ಯಕ್ಕಾಗಿ ಖರೀದಿಸಿದ ಒಟ್ಟು ಕಚ್ಚಾ ಸಾಮಗ್ರಿಯ ಮೇಲೆ ಮಾತ್ರ ಮಾರುಕಟ್ಟೆ ಶುಲ್ಕದ ಸಂದಾಯದಿಂದ ವಿನಾಯತಿಗೊಳಿಸತಕ್ಕದ್ದು.

(v) ನಿರ್ದೇಶಕರು, ಕೈಗಾರಿಕೆಗಳು ಹಾಗೂ ವಾಣಿಜ್ಯ ಇಲಾಖೆ, ಕರ್ನಾಟಕ ಸರ್ಕಾರ ಅಥವಾ ಇವರ ನಾಮ ನಿರ್ದೇಶಿತರು, ಈತನು ಮೇಲಿನ ಷರತ್ತುಗಳನ್ನು ಪೂರೈಸಿರುತ್ತಾನೆ ಹಾಗೂ ಈತನು ಶುಲ್ಕದ ವಿನಾಯಿತಿಗೆ ಅರ್ಹನಾಗಿರುತ್ತಾನೆ ಎಂದು ಪ್ರಮಾಣೀಕರಿಸಿ ನೀಡಿರುವ ಪ್ರಮಾಣಪತ್ರವನ್ನು ಹಾಜರುಪಡಿಸತಕ್ಕದ್ದು."

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ರಾಜ್ಯದಲ್ಲಿ ಹೊಸ ಕೈಗಾರಿಕಾ ಕಾರ್ಯನೀತಿಗಳಿಗನುಸಾರವಾಗಿ ವಿಸ್ತರಣೆ ಅಥವಾ ಆಧುನೀಕರಣವನ್ನು ಕೈಗೊಂಡಿರುವ ಹೊಸ ಆಹಾರ ಸಂಸ್ಕರಣಾ ಕೈಗಾರಿಕೆಗಳು ಮತ್ತು ಅಸ್ತಿತ್ವದಲ್ಲಿರುವ ಕೈಗಾರಿಕೆಗಳು ಮಾಡಿದ ಕೃಷಿ ಉತ್ಪನ್ನದ ಖರೀದಿಗಳಿಗೆ ಸಂಬಂಧಿಸಿದಂತೆ, ಅಂಥ ಆಹಾರ ಸಂಸ್ಕರಣಾ ಕೈಗಾರಿಕೆಗಳ ಸಂಬಂಧದಲ್ಲಿ, ಮಾರುಕಟ್ಟೆ ಶುಲ್ಕವನ್ನು ಸಂದಾಯ ಮಾಡುವುದರಿಂದ ವಿನಾಯತಿಗೊಳಿಸುವುದಕ್ಕಾಗಿ ಒಂದು ಉಪಬಂಧವನ್ನು ಕಲ್ಪಿಸಲು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ), ಅಧಿನಿಯಮ, 1966ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದಾಗಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಮಾಡಿದ ಮಾರುಕಟ್ಟೆ ಶುಲ್ಕದ ಸಂಗ್ರಹದಲ್ಲಿ ವರ್ಷವೊಂದಕ್ಕೆ ಸುಮಾರು 8.00 ರಿಂದ 10.00 ಕೋಟಿ ರೂಪಾಯಿಗಳ ಕೊರತೆ ಉಂಟಾಗಬಹುದು.

**ಲಕ್ಷ್ಮಣ್ ಎಸ್. ಸವದಿ**
ಸಹಕಾರಿ ಮತ್ತು ಕೃಷಿ ಮಾರುಕಟ್ಟೆ ಸಚಿವರು

**ಪಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

**ಅನುಬಂಧ**

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ)**
**ಅಧಿನಿಯಮ, *1966* ರ (*1966*ರ ಕರ್ನಾಟಕ ಅಧಿನಿಯಮ *27*)**

xx xx xx

65. **ಮಾರುಕಟ್ಟೆ ಶುಲ್ಕವನ್ನು ವಿಧಿಸುವುದು.–** xx xx xx

(4) ಈ ಅಧಿನಿಯಮದಲ್ಲಿ ಏನೇ ಇದ್ದರೂ, ಸರ್ಕಾರಿ ಆದೇಶ ಸಂಖ್ಯೆ ಸಿಐ 319 ಎಸ್ ಪಿ ಐ 2005 ದಿನಾಂಕ 26ನೇ ಆಗಸ್ಟ್ 2006 ಅನುಸಾರವಾಗಿ ಸರ್ಕಾರದ ಕೈಗಾರಿಕಾ ಕಾರ್ಯನೀತಿಗನುಸಾರವಾಗಿ, ಹೊಸ ಕೃಷಿ ಉತ್ಪನ್ನ ಸಂಸ್ಕರಣಾ ಕೈಗಾರಿಕೆಗಳು ಖರೀದಿ ಮಾಡುವ ಕೃಷಿ ಉತ್ಪನ್ನದ ಸಂಬಂಧದಲ್ಲಿ ಅಂಥ ಸಂಸ್ಕರಣಾ ಕೈಗಾರಿಕೆಗಳು ಐದು ವರ್ಷದ ಅವಧಿಯವರೆಗೆ ಯಾವುದೇ ಮಾರುಕಟ್ಟೆ ಶುಲ್ಕವನ್ನು ಸಂದಾಯಮಾಡುವಂತಿಲ್ಲ.

xx xx xx

## *KARNATAKA LEGISLATIVE COUNCIL*
## *HUNDRED AND FOURTEENTH SESSION*

# *THE KARNATAKA AGRICULTURAL PRODUCE MARKETING (REGULATION AND DEVELOPMENT) (AMENDMENT) BILL, 2011*

## *(L.C. Bill No. 02 of 2011)*

A Bill further to amend the Karnataka Agricultural Produce Marketing (Regulation and Development) Act, 1966.

Whereas it is expedient further to amend the Karnataka Agricultural Produce Marketing (Regulation and Development) Act, 1966 (Karnataka Act 27 of 1966) for the purposes hereinafter appearing;

Be it enacted by the Karnataka State Legislature in the sixty first year of the Republic of India as follows:-

***1. Short title and commencement.***- (1) This Act may be called the Karnataka Agricultural Produce Marketing (Regulation and Development) Act, 2011.

(2) It shall come into force at once.

***2. Amendment of section 65.***- In the Karnataka Agricultural Produce Marketing (Regulation and Development) Act, 1966 (Karnataka Act 27 of 1966), in section 65,-

(1) after sub-section (4), the following shall be inserted, namely:-

"Provided that the existing processing industries who undertake expansion/modernization/ diversification shall also be exempted from payment of market fee, for a period of five years from the date of the commencement of the Karnataka Agricultural Produce Marketing (Regulation and Development)(Amendment) Act, 2011 subject to the following conditions, namely:-

(a) a minimum investment of fifty percent of the earlier investment on fixed assets has to be made;

(b) the increased production compared to the average of the production made in the previous three years qualifies for exemption under expansion programme;

(c) raw material used for production of new product other than existing one will be considered for diversification programme;

